# ಕಣ್ಣುಗಳನ್ನು ಮುಚ್ಚಿ ನಿಮಗೇನು ಬೇಕೆಂದು ನಿರ್ಧರಿಸಿ.



ಉಳಿತಾಯ ಮಾಡಿದರೆ ಬಯಕೆಗಳು ಈಡೇರುತ್ತವೆ. ಒಂದು ಸೈಕಲ್ಲೇ? ಒಂದು ಗೊಂಬೆಗಳ ಮನೆಯೇ? ಹೊಸ ಆಟದ ಸಾಮಾನೇ? ನಿಮ್ಮ ಹಣದಿಂದಲೇ ಖರೀದಿಸಬಹುದು. ಕೆನರಾ ಬ್ಯಾಂಕಿನ **ಬಾಲಕ್ಷೇಮ** ಶೇವಣಿ ಯೋಜನೆ ನಿಮಗಾಗಿ ಇದೆ. ಬೀಗದ ಕೈಯುಳ್ಳ ಸುಂದರವಾದ **ಬಾಲಕ್ಷೇಮ** ಉಳಿತಾಯ ಪೆಟ್ಟಿಗೆಯಲ್ಲಿ ನಾಣ್ಯಗಳ ಮೇಲೆ ನಾಣ್ಯಗಳನ್ನು ಶೇಖರಿಸಿ. ಪೆಟ್ಟಿಗೆ ತುಂಬಿದೊಡನೆ ಕೆನರಾ ಬ್ಯಾಂಕಿನಲ್ಲಿ ಜಮಾ ಮಾಡಿ ನಾಣ್ಯ ಸಂಗ್ರಹಣೆ ಪುನರಾರಂಭಿಸಿ. ನಾವೂ ಅದಕ್ಕೆ ಸೇರಿಸುವ ಕಾರಣ ನಿಮ್ಮ ಹಣ ಬೆಳೆಯುತ್ತದೆ. ಕೂಡಲೇ, ನಿಮಗೆ ಬೇಕಾದ್ದನ್ನು ಕೊಳ್ಳುವಷ್ಟು ದೊಡ್ಡದಾಗುತ್ತದೆ.

ನಿಮ್ಮ ಬಯಕೆ ಈಡೇರಲು ಎಂತಹ ಚಮತ್ಕಾರ! ಉಳಿತಾಯದ ಪಾಠಕ್ಕೆ ಎಂತಹ ಅದ್ಭುತ ಮಾರ್ಗ!

ಹೆಚ್ಚಿನ ವಿವರಗಳಿಗೆ ನಿಮ್ಮ ಸಮೀಪದ ಕೆನರಾ ಬ್ಯಾಂಕ್ ಶಾಖೆಗೆ ಭೇಟಿ ನೀಡಿ. **ಕಾಮಧೇನು**, **ವಿದ್ಯಾನಿಧಿ** ಮತ್ತು **ನಿರಂತರ** ನಮ್ಮ ಇತರ ವಿಶೇಷ ಯೋಜನೆಗಳು.

## ಬಾಲಕ್ಷೇಮ ಶೇವಣಿ ಯೋಜನೆ




## ಕೆನರಾ ಬ್ಯಾಂಕ್




(ಒಂದು ರಾಷ್ಟ್ರೀಕೃತ ಬ್ಯಾಂಕ್)

(ರಾಷ್ಟ್ರದಾದ್ಯಂತ)

1,200 ಕ್ಕೂ ಹೆಚ್ಚು ಶಾಖೆಗಳು

# ಫ್ಲಾಶ್ ಬಳಸಿರಿ, ನಗೆ ಬೆಳಗಿಸಿರಿ.



**ನಿಮ್ಮ ನಗೆಗೆ ಈ ಪರಿಯ ಆಹ್ಲಾದಕರ ಸೊಬಗು ಬರಲು ಕಾರಣಗಳು:**

**ಫ್ಲಾಶ್ ಉಲ್ಲಾಸ...**
ಫ್ಲಾಶ್‌ನಲ್ಲಿರುವ ನೀಲಿ ಸತ್ವ
ಬಾಯಿಯ ದುರ್ಗಂಧವನ್ನು
ಹೋಗಲಾಡಿಸುತ್ತದೆ,
ದಂತಕ್ಷಯಕ್ಕೆ ಕಾರಣವಾದ
ಕೀಟಾಣುಗಳನ್ನು ನಿವಾರಿಸುತ್ತದೆ.

**ಫ್ಲಾಶ್ ಆತ್ಮವಿಶ್ವಾಸ...**
ಇದಕ್ಕೆ ಕಾರಣ, ನಿಮ್ಮ ಹಲ್ಲುಗಳನ್ನು,
ಒಸಡುಗಳನ್ನು, ಹೆಚ್ಚೇನು,
ಇಡೀ ಬಾಯಿಯನ್ನೆ ರಕ್ಷಿಸಲು
ಬೇಕಾದದ್ದೆಲ್ಲ ಫ್ಲಾಶ್‌ನಲ್ಲಿದೆ
ಎಂದು ನಿಮಗೆ ಗೊತ್ತಿರುತ್ತದೆ.

**ಫ್ಲಾಶ್ ರುಚಿ...**
ವ್ಹಾ, ಎಷ್ಟು ಮ-ಮ-ಮಜಾ !
ಬ್ರಶ್ ಮಾಡುತ್ತಲೇ ಇರೋಣ
ಅನಿಸುವಷ್ಟು ಆನಂದ !




## ಫ್ಲಾಶ್

**ಟೂತ್‌ಪೇಸ್ಟ್** ಬಾಯಿಯನ್ನು ಶುದ್ಧೀಕರಿಸುವ ಉಲ್ಲಾಸಭರಿತ ನೀಲಿ ಸತ್ವಯುಕ್ತ

everest/80/FL/183-kn

# ಶ್ರದ್ಧಾಂಜಲಿ



## ಶ್ರೀ ಬಿ. ಎಲ್. ಎನ್. ಪ್ರಸಾದ್

ಜನನ: 12-11-1934 :: ನಿರ್ಯಾಣ: 31-5-1980

ನಮ್ಮ ಚಂದಮಾಮ ವ್ಯವಸ್ಥಾಪಕರೂ, ಸಂಚಾಲಕರೂ ಆದ ಶ್ರೀ ಬಿ. ನಾಗಿರೆಡ್ಡಿಯವರ ಜ್ಯೇಷ್ಠ ಪುತ್ರರು ಶ್ರೀ ಪ್ರಸಾದ್ ಇನ್ನು ನಮಗೆ ಇಲ್ಲ. ನಿಧನರಾದ ಕಾಲಕ್ಕೆ ಅವರ ವಯಸ್ಸು 45 ವರ್ಷಗಳು.

ಚಂದಮಾಮಕ್ಕೆ ಅವರು ಮುದ್ರಕರು ಮಾತ್ರವೇ ಅಲ್ಲ, ಅದರ ವ್ಯಾಪ್ತಿಗೂ, ಅಭಿವೃದ್ಧಿಗೂ ಈಡು ಕೊಡುತ್ತಿದ್ದ ಮಹಾ ಮೇಧಾವಿ. ನಮಗೆ ಉಂಟಾಗಿರುವ ನಷ್ಟ ತೀರುವಂತಹುದಲ್ಲ. ಅವರನ್ನು ಪ್ರೇಮದಿಂದ ಸ್ಮರಿಸುತ್ತ, ಅವರ ಜ್ಞಾಪಕಾರ್ಥವಾಗಿ ಅವರು ನೆಲೆಗೊಳಿಸಿದ ಉನ್ನತ ಪ್ರಮಾಣಗಳನ್ನು ಬಿಡದೆ ಕೆಲಸಮಾಡಿಕೊಂಡಿರೋಣ.

ಪಬ್ಲಿಷರ್ಸ್




# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'

ಸಂಚಾಲಕರು : ನಾಗಿರೆಡ್ಡಿ

**ಈ** ಸಂಚಿಕೆಯಲ್ಲಿ "ಬೇಡವಾದ ವಸ್ತುಗಳು" ಎಂಬ ಒಂದು ಸಣ್ಣ ಕಥೆ ಯಿದೆ. ಕಥೆಯಲ್ಲಿ ಅಂತಹ ವಿಶೇಷವೇನಿಲ್ಲದಿದ್ದರೂ, ಪ್ರತಿ ನಿತ್ಯವೂ ಬೇಡ ವಾದ ವಸ್ತುಗಳೆಂದು ಬಿಸುಡುವ ಕಸಗಪ್ಪುಗಳನ್ನು ಕುರಿತು ಎಲ್ಲರಿಗೂ ಯೋಚನೆ ಬರಿಸುವಂತಹುದು. ಜಗಿದು ಉಗುಳುವ ಕಬ್ಬಿನ ನಾರುಗಳಿಂದ, ಬೆಂಕಿ ಗೀರಿ ಬಿಸುಡುವ ಕಡ್ಡಿಗಳಿಂದ, ಒಣಸಿಪ್ಪೆಗಳಿಂದ, ಕೀಸುಳಿ ಚೂರು ಗಳಿಂದ ಕಲಾವಸ್ತುಗಳನ್ನು ತಯಾರಿಸುವವರಿದ್ದಾರೆ. ಅದಕ್ಕೇ 'ಕಡ್ಡೀ ಚೂರು ಕೂಡಾ ಹಲ್ಲಿನೆಡೆಗೆ ಬೇಕಾಗುತ್ತೆ' ಎನ್ನುವುದು.

## ಅಮರವಾಣಿ

**ಪರಾಪವಾದೇ ಬಧಿರಃ ಪರಚ್ಛಿದ್ರೇ ಷ್ವಲೋಚನಃ**
**ಪಂಗುಃ ಕರ್ಮ ಸ್ವನಾರ್ಯೇಷು ದುಸ್ಸಂಕಲ್ಪೇ ಷ್ವಚೇತನಃ**

ಇತರರನ್ನು ನಿಂದಿಸುವ ವಿಷಯದಲ್ಲಿ ಕಿವುಡನಾಗಿ, ಇತರರ ತಪ್ಪುಗಳನ್ನು ನೋಡುವುದರಲ್ಲಿ ಕುರುಡನಾಗಿ, ಕೆಟ್ಟ ಕೆಲಸ ಮಾಡುವುದರಲ್ಲಿ ಕುಂಟನಾಗಿ, ಕೆಟ್ಟ ಆಲೋಚನೆ ಮಾಡುವುದರಲ್ಲಿ ಬುದ್ಧಿಹೀನನಾಗಿ ಇರುವವರು ಸತ್ಪುರುಷರು.

ಸಂಪುಟ : ೬೫ ಜೂಲೈ '೮೦ ಸಂಚಿಕೆ : ೧

**ಬಿಡಿ ಪ್ರತಿ ರೂ. ೧-೫೦ : : ವಾರ್ಷಿಕ ಚಂದಾ ರೂ. ೧೮-೦೦**




**ಬಿ. ದುರ್ಗಾಪ್ರಸಾದ್, ಕವಿಟ.**

ಪ್ರ: ಮನುಷ್ಯನ ಮನಸ್ಸು ಎಲ್ಲಾ ಸಮಸ್ಯೆಗಳಲ್ಲಿಯೂ ಭೂತಕಾಲ ಭವಿಷ್ಯತ್ಕಾಲಗಳನ್ನು ಕುರಿತು ಆಲೋಚಿಸುತ್ತದೆಯೇ ಹೊರತು ವರ್ತಮಾನ ಕಾಲದಲ್ಲಿ ನಡೆಯುವ ಸಂಭವಗಳನ್ನು ಕುರಿತು ಆಲೋಚಿಸುವುದಿಲ್ಲವೇಕೆಂದು ಹೇಳುವಿರಾ ?

ಉ: ಗತಕಾಲ ಮತ್ತು ಭವಿಷ್ಯತ್ಕಾಲಗಳನ್ನು ಕುರಿತು ಯಾರೇ ಆಗಲಿ ಅರ್ಥಮಾಡಿಕೊಳ್ಳಬಲ್ಲರು. ಆದರೆ ವರ್ತಮಾನ ಕಾಲವೆಂದರೆ, ಅದು ಏನೆಂದು ವಿವರಿಸಿ ಹೇಳುವುದಾದರೂ ಕಷ್ಟವಾಗಿದೆ. ಸಂದರ್ಭಕ್ಕೆ ತಕ್ಕಹಾಗೆ ಅದರ ಸ್ವರೂಪ ಬದಲಾಯಿಸಿಕೊಂಡಿರುತ್ತದೆ. "ಈ ವರ್ಷ", "ಈ ದಿನ", "ಈ ಶತಮಾನ" ಎಂಬ ಮಾತುಗಳನ್ನು ಉಪಯೋಗಿಸುವಾಗ ಒಂದು ವರ್ಷವೂ, ಒಂದು ದಿನವೂ, ಒಂದು ಶತಮಾನವೂ ವರ್ತಮಾನ ಕಾಲವಿರುವಂತೆಯೇ ಮಾತಾಡುತ್ತೇವೆ. ಹಾಗೆಯೇ "ಆಧುನಿಕ ಯುಗದಲ್ಲಿ" ಎನ್ನುವಾಗ ಆ ಯುಗ ಭೂತಕಾಲವೂ ಅಲ್ಲದ ಭವಿಷ್ಯತ್ಕಾಲವೂ ಅಲ್ಲದ ವರ್ತಮಾನ ಕಾಲವೇ ಆಗಬೇಕಾಗುತ್ತದೆ.

ಮನಸ್ತತ್ವ ರೀತಿಯಾಗಿ ನೋಡಿದರೆ ಅಸಲು, ವರ್ತಮಾನ ಕಾಲವೆಂಬುದಿದೆಯೋ ಎಂಬ ಸಂದೇಹ ಉಂಟಾಗುತ್ತದೆ. ಪ್ರತಿಕ್ಷಣವೂ ವರ್ತಮಾನದಿಂದ ಭೂತಕಾಲಕ್ಕೆ ಹೋಗುತ್ತಾ ಇರುತ್ತದೆ. ಭವಿಷ್ಯತ್ತಿನಿಂದ ವರ್ತಮಾನಕ್ಕೆ ಬರುತ್ತಾ ಇರುತ್ತದೆ. ಯಾವ ಕ್ಷಣವನ್ನೂ ನಾವು ಹಿಡಿದು ನಿಲ್ಲಿಸಿ "ಇದು ವರ್ತಮಾನ" ಎಂದು ಹೇಳಲಾರೆವು.

ಆದುದರಿಂದ ಮನಸ್ಸು ಯಾವುದರ ಮೇಲಾದರೂ ಲಗ್ನವಾಗಿರುವಷ್ಟು ಕಾಲವೂ ಅದು ವರ್ತಮಾನ ಕಾಲವೇ ಆಗುತ್ತದೆ. ಆದುದರಿಂದ ಮನಸ್ಸು ಹೊಂದುವ ಯಾವ ಅನುಭವವಾದರೂ ವರ್ತಮಾನಕ್ಕೆ ಸೇರಿದ್ದೆಂದೇ ತಿಳಿಯಬಹುದು. ಅನುಭವವು ಪೂರ್ತಿಯಾದ ಹೊರತು ಅದನ್ನು ಗತಕಾಲಕ್ಕೆ ಸೇರಿಸುವಂತಿಲ್ಲ. ಒಂದು ಕಥೆ ಕೇಳುತ್ತೇವೆ, ಇಲ್ಲವೇ ಒಂದು ನಾಟಕ ನೋಡುತ್ತೇವೆ, ಅಥವಾ ಒಂದು ಹಾಡನ್ನು ಕೇಳುತ್ತೇವೆ.

ಆಗ ಮನಸ್ಸು ಹೊಂದುವ ಅನುಭವವು ಜ್ಞಾನೇಂದ್ರಿಯ ಕರ್ಮೇಂದ್ರಿಯಗಳಿಗೆ ಸಂಬಂಧಿಸಿಕೊಂಡಿರುತ್ತದೆ. ಈ ಅನುಭವವನ್ನು ಗತಕಾಲದಿಂದಾಗಲಿ, ಭವಿಷ್ಯತ್ಕಾಲದಿಂದಾಗಲಿ ಹೊಂದುವುದು ಸಾಧ್ಯವಿಲ್ಲ. ಆದುದರಿಂದ ನಮ್ಮ ಅನುಭವಗಳೆಲ್ಲಾ ವರ್ತಮಾನಕ್ಕೆ ಸೇರಿದ್ದೆಂದೇ ಹೇಳಬೇಕು. ಮನಸ್ಸು ಆಲೋಚಿಸುವುದು ಅನುಭವವನ್ನು ಕುರಿತೇ ಆದುದರಿಂದ, ಅನುಭವ ಪಡೆಯುತ್ತಿರುವಾಗ ಅದನ್ನು ಕುರಿತು ಆಲೋಚಿಸುವುದು ಸಾಧ್ಯವಿಲ್ಲ. ಹಾಡಿನ ಒಂದು ತಾನವು ಚೆನ್ನಾಗಿದೆ ಅನಿಸಿದರೂ, ಸಿನಿಮಾದಲ್ಲಿ ಒಂದು ನಟನೆ ಕೆಟ್ಟುಹೋಯಿತೆನಿಸಿದರೂ, ಗ್ರಂಥದೊಳಗಿನ ಒಂದು ಮಾತು ಎರಡು ಅರ್ಥಗಳನ್ನು ಸ್ಫುರಿಸುವಂತೆನಿಸಿದರೂ ಅನುಭವವಾದ ಮೇಲೆಯೇ ಹೊರತು ಸಾಧ್ಯವಾಗದು. ಆದುದರಿಂದ ತನ್ನ ಸಂಪೂರ್ಣ ಜೀವಿತಕಾಲವೆಲ್ಲಾ ವರ್ತಮಾನವೆಂದೇ ಹೇಳಬೇಕಾಗುತ್ತದೆ.

ಇನ್ನು ಭವಿಷ್ಯತ್ತನ್ನು ಕುರಿತು ಆಲೋಚಿಸುವುದೆಂದರೆ, ಅದು ಭೂತಕಾಲವನ್ನು ಕುರಿತು ಆಲೋಚಿಸುವಂತಹುದಲ್ಲ. ಅದು ಸಂಪೂರ್ಣವಾಗಿ ಅವರವರ ರೀತಿ ನೀತಿ ನಡತೆಗಳಿಗೆ ತಕ್ಕುವಾದ ಊಹನೆಯ ಮೇಲೆ ಆಧಾರವಾಗಿರುವಂತಹದು. ಆ ಊಹನೆ ಕೂಡಾ ಅವರವರ ಜೀವನದಲ್ಲಿ ನಡೆದ ಅನುಭವಗಳ ಮೇಲೆ ಆಧಾರವಾಗಿರುವುದರಿಂದ, ಅನುಭವಕ್ಕೆ ಸಂಬಂಧವಿಲ್ಲದುವುಗಳನ್ನು ಆಲೋಚನೆ ಮಾಡುವುದು ಸಾಧ್ಯವಾಗದು.





ಬೆಕ್ಕಿನ ಮೂಲದಿಂದಾಗಿ ಜರದ್ಗವಹದ್ದು ಸತ್ತು ಹೋದ ಕಥೆಯನ್ನು ಹೇಳಿದ ಮೇಲೆ ಕಾಗೆ ಜಿಂಕೆಯೊಂದಿಗೆ, "ಆದುದರಿಂದಲೇ ಕುಲಗೊತ್ರಗಳೂ, ಸ್ವಭಾವವೂ ತಿಳಿಯದವರನ್ನು ಸಮೀಪ ಸೇರಿಸಿಕೊಳ್ಳಬಾರದು" ಎಂದಿತು.

ಕಾಗೆಯ ಮಾತನ್ನೆಲ್ಲ ಮರೆಯಲ್ಲಿದ್ದು ಕೇಳಿದ ನರಿ, ಮುಂದೆ ಬಂದು ಬಹಳ ಕೋಪದಿಂದ, "ಏನೆಲೇ ಕಾಗೇ ! ಜಿಂಕೆಗೆ ನೀನು ಮೊದಲು ಪರಿಚಿತನಾದಾಗ ಅದಕ್ಕೆ ನಿನ್ನ ಕುಲಗೋತ್ರ ಸ್ವಭಾವಗಳೆಲ್ಲಾ ಗೊತ್ತಿತ್ತೇನು ? ಅದಕ್ಕೂ ನಿನಗೂ ದಿನದಿಂದ ದಿನಕ್ಕೆ ಹೇಗೆ ಮೈತ್ರಿ ಅಭಿವೃದ್ಧಿಯಾಗುತ್ತಾ ಬಂತು ? ನಿನ್ನ ಅಲ್ಪ ಬುದ್ಧಿ ಇದರಲ್ಲೇ ಕಾಣುತ್ತದೆ. 'ಇದು ನನ್ನದು, ಇದು ಪರರದು' ಎಂಬ ಭಾವವು ಸಂಕುಚಿತ ಬುದ್ಧಿಯವರಿಗಷ್ಟೇ ಬರುತ್ತದೆ. ಪಂಡಿತರಿಲ್ಲದ ಕಡೆಯಲ್ಲಿ ಪಾಂಡಿತ್ಯವಿಲ್ಲದವನೇ ಹೊಗಳಲ್ಪಡುತ್ತಾನೆ, ಮರಗಳಿಲ್ಲದ ಕಡೆಯಲ್ಲಿ ಹರಳೇಮರವೇ ಮಹಾ ವೃಕ್ಷ. ವಿಶಾಲ ಹೃದಯವುಳ್ಳವರಿಗೆ ಪ್ರಪಂಚವೆಲ್ಲಾ ತಮ್ಮದೆನಿಸುತ್ತದೆ; ಇದಕ್ಕೆ ತಕ್ಕ ಹಾಗೆಯೇ ಇದೆ ನಿನ್ನ ಗುಣ. ಒಂದು ತಿಳಿದುಕೊ, ಈ ಜಿಂಕೆಗೆ ನಾನು ಹೇಗೆ ಮಿತ್ರನಾದೇನೋ ಹಾಗೆಯೇ ನೀನೂ ಆಗಿರುವೆ. ಅಷ್ಟೇ ಹೊರತು ಎಚ್ಚರಿಕೆ ತಿಳಿಸುವಂತೇನೂ ಇಲ್ಲ." ಎಂದಿತು.

"ಸುಮ್ಮನೆ ತಕರಾರು ಏತಕ್ಕೆ ಬಿಡೀ ! ನಾವೆಲ್ಲರೂ ಕೂಡಿ ಒಟ್ಟಾಗಿಯೇ ಇರೋಣ. ಜನ್ಮತ; ಯಾರಿಗೂ ಯಾರೂ ಶತ್ರುವೂ ಅಲ್ಲ, ಮಿತ್ರರೂ ಅಲ್ಲ. ಇಷ್ಟರವರೆಗೆ ಅಪರಿಚಿತರಾಗಿದ್ದೆವು. ಇನ್ನು ಮಿತ್ರರಾಗಿರೋಣ" ಎಂದಿತು ಜಿಂಕೆ.

"ಹಾಗೇ ಇರೋಣ" ಎಂದಿತು ಕಾಗೆ. ಅಂದಿನಿಂದ ಆ ಮೂರು ಪ್ರಾಣಿಗಳೂ ಒಟ್ಟಿಗೇ ಇರುತ್ತ, ಹಗಲಿನಲ್ಲಿ ಆಹಾರದ ಅನ್ವೇಷಣೆಗೆ ಯಾವದರ ದಾರಿ ಅದು ಹಿಡಿದು ಹೋಗುತ್ತಾ ಇದ್ದುವು.

ಒಂದು ದಿನ ನರಿ ಏಕಾಂತದಲ್ಲಿ ಜಿಂಕೆಯನ್ನು ನೋಡಿ, "ಮಿತ್ರಾ, ಈ ಅರಣ್ಯದ ಒಂದು ಮೂಲೆಯಲ್ಲಿ ಹಸಿರು ಬೆಳೆಯಿಂದ ನಳನಳಿಸುವ ಒಂದು ಹೊಲವಿದೆ. ಅದನ್ನು ನಿನಗೆ ತೋರಿಸುತ್ತೇನೆ"ಎಂದು ಅದರ ಆಸೆಯನ್ನು ಕೆರಳಿಸಿ ಆ ಕಡೆಗೆ ಕರೆದುಕೊಂಡು

ಹೋಯಿತು. ಆ ಮೇಲೆ ಜಿಂಕೆ ದಿನಾ ಆ ಹೊಲದ ಬಳಿಗೆ ಹೋಗಿ ಹೊಟ್ಟೆ ತುಂಬ ಪೈರು ಮೇದು ಬರುತ್ತಿತ್ತು. ದಿನಾ ಬೆಳಿಗ್ಗೆ ಬಂದು ಹೋಗುವ ಆ ಹೊಲದ ಮನುಷ್ಯನಿಗೆ ಈ ಸಂಗತಿ ಗೊತ್ತಾಯಿತು. ಆವನು ಅಲ್ಲಿಗೆ ಬರುವ ಮೃಗವನ್ನು ಹಿಡಿಯಲು ತಕ್ಕ ಜಾಗದಲ್ಲಿ ಉರುಳು ಹಾಕಿಟ್ಟನು. ಜಿಂಕೆ ಆ ಉರುಳಿನಲ್ಲಿ ಸಿಕ್ಕಿಕೊಂಡು ಬಿಟ್ಟಿತು.

"ನಾನೀಗ ಸಾವಿನ ಬಾಯಿಗೆ ಸಿಕ್ಕಿಕೊಂಡೆ. ಮಿತ್ರನ ಹೊರತು ನನ್ನನ್ನು ಕಾಪಾಡುವವರು ಬೇರೆ ಯಾರಿದ್ದಾರೆ? ಆಪತ್ತಿನಲ್ಲಿ ಕಾಪಾಡುವವನೇ ಮಿತ್ರನಲ್ಲವೆ?" ಎಂದು ಜಿಂಕೆ ಅಂದುಕೊಂಡಿತು.

ಅಷ್ಟರಲ್ಲಿ ನರಿ ಆ ಕಡೆಗೆ ಬಂದು, ಉರುಳಿನಲ್ಲಿ ಸಿಕ್ಕಿಕೊಂಡ ಜಿಂಕೆಯನ್ನು ನೋಡಿ, "ನನ್ನ ಉಪಾಯ ಸರಿಯಾಗಿ ಕೆಲಸ ಮಾಡಿತು. ನಾಳೆ ಬೆಳಗಾದ ಕೂಡಲೇ ರೈತನು ಬಂದು, ಇದನ್ನು ಕೊಂದು ಕೊಯ್ದು ಮಾಂಸ ಅಂಟಿಕೊಂಡ ಎಲುಬುಗಳನ್ನಾದರೂ ಬಿಸಾಡದಿರಲಾರ. ಈ ಜಿಂಕೆಯ ಮಾಂಸದ ರುಚಿ ನೋಡಬೇಕೆಂಬುದು ತಾನೇ ನನ್ನ ಗುರಿ? ಆ ಮನುಷ್ಯನನ್ನು ನನ್ನ ಮಾತಿನ ಮೋಡಿಯಿಂದ ಮೋಸಪಡಿಸಿ ಮಾಂಸ ಕದಿಯಲು ಸಾಧ್ಯವಾಗದೆ ಹೋಗದು." ಎಂದುಕೊಂಡಿತು.

ಜಿಂಕೆ ತನ್ನ ಮಿತ್ರನನ್ನು ನೋಡಿ ಸಂತಸಪಟ್ಟು, "ಮಿತ್ರಾ! ಈ ಉರುಳನ್ನು ನಿನ್ನ ಕೋರೆ ಹಲ್ಲುಗಳಿಂದ ಕಡಿದು ನನ್ನನ್ನು ಬಿಡಿಸಿ ಬಿಡು, ಸ್ನೇಹಿತನ ಬೆಲೆ ಆಪತ್ಸಮಯದಲ್ಲಿಯೂ, ಯೋಧನ ಬೆಲೆ ಯುದ್ಧದಲ್ಲಿಯೂ, ನಂಬುಗೆಯುವನ ಬೆಲೆ ಸಾಲದಲ್ಲಿ ಮುಳುಗಿದ ಕಾಲದಲ್ಲಿಯೂ, ಹೆಂಡತಿಯ ಬೆಲೆ ಕಡುಬಡತನದಲ್ಲಿಯೂ, ಬಂಧುಗಳ ಬೆಲೆ ಶೋಕ ಸಮಯದಲ್ಲಿಯೂ ಗೊತ್ತಾಗುತ್ತದಂತೆ. ವಿನೋದದಲ್ಲಿಯೂ, ವಿಷಾದದಲ್ಲಿಯೂ, ಕ್ಷಾಮದಲ್ಲಿಯೂ, ಅರಾಜಕದಲ್ಲಿಯೂ, ರಾಜದ್ವಾರದಲ್ಲಿಯೂ, ಸ್ಮಶಾನದಲ್ಲಿಯೂ ಸಹಾಯವಾಗಿ ನಿಂತವನೇ ನಿಜವಾದ ಮಿತ್ರನೂ ಬಂಧುವೂ ಅನಿಸಿಕೊಳ್ಳುವನು. ಅಂತೆಯೇ ಬೇಗನೇ ನಿನ್ನ ಸಹಾಯದಿಂದ ನನ್ನನ್ನು ಉಳಿಸು." ಎಂದಿತು.



ನರಿ ಉರುಳಿನ ಹಗ್ಗವನ್ನು ಮೂರುನಾಲ್ಕು ಸಾರಿ ಜಾಗರೂಕತೆಯಿಂದ ನೋಡಿ, "ಗಟ್ಟಿಯಾಗಿದೆ, ಇದು ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ" ಎಂದು ತನ್ನೊಳಗೆ ದೃಢಪಡಿಸಿಕೊಂಡು, "ಮಿತ್ರಾ, ಈ ಉರುಳನ್ನು ನರಗಳ ಹಗ್ಗದಿಂದ ಮಾಡಿದ್ದಾರೆ. ಪವಿತ್ರವಾದ ಈ ಆದಿತ್ಯವಾರದ ದಿನ ಅಪವಿತ್ರವಾದ ಈ ಪ್ರಾಣಿಯ ನರಗಳನ್ನು ನನ್ನ ಕೋರೆಗಳಿಂದ ಹೇಗೆ ಕಚ್ಚಲಿ? ಪ್ರಪಂಚಕ್ಕೆಲ್ಲಾ ಕಾಂತಿಯನ್ನೂ, ಶೌಚವನ್ನೂ ಕೊಡುವ ಸೂರ್ಯ ಭಗವಾನನಿಗೆ ಅಂಕಿತವಾದ ದಿನವಿದು. ಈ ದಿನ ನಿನ್ನ ಆಶೆ ನೆರವೇರಿಸಲಾಗದ್ದಕ್ಕೆ ಅಪಾರ್ಥ ಮಾಡಿಕೊಳ್ಳಬೇಡ. ನಾಳೆ ಬೆಳಿಗ್ಗೆ ಬೇಗ ಬಂದು ನಿನ್ನನ್ನು ಬಿಡಿಸಿ ಬಿಡುತ್ತೇನೆ. ನನ್ನನ್ನೂ ನನಗಿಂತ ಮೇಲೆ ದೇವರನ್ನೂ ನಂಬಿಕೊಂಡು ಧೈರ್ಯವಾಗಿರು." ಎಂದು ಹೇಳಿ ಆಚೆಗೆ ಹೋಗಿ, ಪೊದೆಗಳ ಹಿಂದೆ ಅಡಗಿ, ಯಾವಾಗ ಹೊಲದ ಮನುಷ್ಯ ಬಂದು ಜಿಂಕೆಯನ್ನು ಕೊಯ್ಯುವನೋ, ಯಾವಾಗ ತನಗೆ ಮಾಂಸ ಅಂಟಿದ ಎಲುಬುಗಳು ಸಿಗುವುವೋ ಎಂದು ಇದಿರು ನೋಡತೊಡಗಿತು. ಸಾಯಂಕಾಲವಾದರೂ ಜಿಂಕೆ ಹಿಂದಿರುಗಿ ಬಾರದಿರುವುದನ್ನು ನೋಡಿ, ಕಾಗೆ ಅಲ್ಲೆಲ್ಲಾ ಹುಡುಕುತ್ತಾ ಕತ್ತಲೆ ಬೀಳುವ ಹೊತ್ತಿಗೆ ಅದು ಹೊಲದ ಕಡೆಗೆ ಬಂದು ಉರುಳಿನಲ್ಲಿ ಸಿಕ್ಕಿಕೊಂಡ ಜಿಂಕೆಯನ್ನು ನೋಡಿತು.

"ಏನಾಯಿತು ಮಿತ್ರಾ?" ಎಂದು ಕೇಳಿತು ಕಾಗೆ.

"ನಿನ್ನ ಮಾತು ಕೇಳದುದಕ್ಕೆ ತಕ್ಕ ಫಲ ಸಿಕ್ಕಿತು, ಹಿತಚಿಂತಕನಾದ ಮಿತ್ರನು ಹೇಳುವ ವಿವೇಕದ ಸಲಹೆಗಳನ್ನು ಕೇಳದವನು ಕಷ್ಟಗಳಿಗೆ ಬೀಳುತ್ತಾನೆ. ಅವನನ್ನು ನೋಡಿ ಅವನ ಶತ್ರುಗಳು ಸಂತೋಷಿಸುತ್ತಾರೆ" ಎಂದು ಜಿಂಕೆ ಕಾಗೆಯೊಂದಿಗೆ ಹೇಳಿತು.

"ಎಲ್ಲಿದ್ದಾನೆ ಕಳ್ಳ ಬುದ್ಧಿಯ ಆ ದ್ರೋಹಿ ನರಿ?" ಎಂದು ಕಾಗೆ ಕೇಳಿತು.

"ಹೌದು. ನಿನ್ನ ಮಾತು ನಿಜ. ನನ್ನ ಮಾಂಸ ಕದಿಯಲಿಕ್ಕಾಗಿ ಕಾಯುತ್ತ ಆ ಪೊದೆಯ ಹಿಂದೆ ಅಡಗಿಕೊಂಡಿದ್ದಾನೆ" ಎಂದಿತು ಜಿಂಕೆ.

"ನಾನು ಮೊದಲೇ ಹೇಳಿದೆ. ನಾವು ನಿರ್ದೋಷಿ



ಗಳಾಗಿ ಒಳ್ಳೆಯವರಾಗಿ ಇದ್ದೇವೆಂದುಕೊಂಡು ದುಷ್ಟರನ್ನು ನಂಬುವುದು ಒಳ್ಳೆಯದಲ್ಲ. ನಿರ್ದೋಷಿಗಳು ಕಷ್ಟಗಳಿಗೆ ಬೀಳುವುದು ದುಷ್ಟರ ಮೂಲಕವಾಗಿಯೇ. ಇದಿರಿನಲ್ಲಿ ಸಿಹಿಯಾಗಿ ಮಾತಾಡಿ, ಪರೋಕ್ಷದಲ್ಲಿ ಪ್ರಯತ್ನಗಳಿಗೆ ವಿಘ್ನಗಳನ್ನುಂಟುಮಾಡುವವರು, ಮೇಲೆ ಹಾಲೂ, ಅಡಿಯಲ್ಲಿ ವಿಷವೂ ಇರುವ ಪಯೋಮುಖ ವಿಷಕುಂಭಗಳು!" ಎಂದು ಕಾಗೆ ದೊಡ್ಡದೊಂದು ನಿಟ್ಟುಸಿರುಬಿಟ್ಟು, "ಎಲೋ ದುರಾತ್ಮನೆ! ಅಷ್ಟೊಂದು ನೀಚತನಕ್ಕೆ ಹೇಗೆ ಸಿದ್ಧನಾದೆಯೋ! ನಿನ್ನೊಂದಿಗೆ ಸಹಜೀವನ ನಡೆಸುತ್ತ, ನೀನು ಹೇಳುವ ಸವಿಸವಿ ಮಾತುಗಳನ್ನು ಕೇಳಿ, ಆಪತ್ತಿನಲ್ಲಿ ಸಹಕರಿಸುವನೆಂದು ನಂಬಿಕೊಂಡ ಮಿತ್ರರಿಗೆ ದ್ರೋಹ ಮಾಡುವುದರಿಂದ ನಿನಗೆಂತಹ ಕೀರ್ತಿ ಬಂದೀತು? ಓ ಭೂದೇವೀ! ವಿಶ್ವಾಸದ್ರೋಹಿಗಳ ಭಾರವನ್ನು ನೀನು ಹೇಗೆ ಹೊರುವೆಯೋ? ದುಷ್ಟನೊಂದಿಗೆ ಸ್ನೇಹವೇ ಕೂಡದು. ಬಿಸಿಯಾಗಿದ್ದರೆ ಕೈಯನ್ನು ಸುಟ್ಟು, ತಣ್ಣಗಾದ ಮೇಲೆ ಕೂಡಾ ಕೈಯನ್ನು ಮಸಿಮಾಡುವ ಇದ್ದಲಿಯಂಥವನು ದುಷ್ಟನೆಂದರೆ! ದುಷ್ಟರ ಪದ್ಧತಿ ಹೀಗೆಯೇ ಎಂದು ತಿಳಿದ ನಾನು ನರಿಯನ್ನು ದೂರಿ ಏನು ಪ್ರಯೋಜನ? ದುಷ್ಟನು ಮೊದಲು ಕಾಲಿಗೆ ಬೀಳುವನು. ಆಮೇಲೆ ಕಿವೀಹತ್ತಿರ ಇಂಪಾಗಿ ಹಾಡುವನು. ಕಡೆಗೆ ವಿಷದ ಹಲ್ಲು ಊರಿಬಿಡುತ್ತಾನೆ. ಅವನ ನಾಲಗೆಯಲ್ಲಿ ಜೇನೂ, ಹೊಟ್ಟೆಯಲ್ಲಿ ವಿಷವೂ ಇರುತ್ತವೆ. ಮಿತ್ರಾ, ಬೆಳಗಾದ ಕೂಡಲೇ ರೈತ ಬರುತ್ತಾನೆ. ನಾನೇನೋ ನಿನ್ನನ್ನು ಕಾಪಾಡಲಾರೆ. ಆದ್ದರಿಂದ ರೈತ ಬರುವುದನ್ನು ದೂರದಿಂದಲೇ ನೋಡಿ ಎಚ್ಚರಿಸುವಂತೆ ಕೂಗುತ್ತೇನೆ. ನೀನು ಸತ್ತಹಾಗೆ ನೆಲದ ಮೇಲೆ ಬಿದ್ದುಕೋ. ನಾನು ಮೊತ್ತೊಮ್ಮೆ ಕೂಗಿದ್ದೇತಡ, ತಟ್ಟನೆದ್ದು ಓಡಿಹೋಗು!" ಎಂದಿತು.

ಬೆಳಂಜಾಮದಲ್ಲಿ ಹೊಲದ ರೈತ ದುಂಡು ದೊಣ್ಣೆಯೊಂದಿಗೆ ಅಲ್ಲಿಗೆ ಬಂದ. ಅವನು ದೂರದಲ್ಲಿರುವಾಗಲೇ ಕಾಗೆ ಕೂಗಿತು. ಜಿಂಕೆ ನೆಲದ ಮೇಲೆ ಪ್ರಾಣ ಬಿಟ್ಟಹಾಗೆ ನಟಿಸುತ್ತ ಬಿದ್ದಿತು. ರೈತ ಸಂತೋಷದಿಂದ, "ನಿನ್ನಷ್ಟಕೇ ಸತ್ತೆಯಾ? ಭೇಷ್!" ಎನ್ನುತ್ತ ಅದರ ಉರುಳು ಹಗ್ಗ ಕಳಚಿದನು. ಕಳಚಿದ ಹಗ್ಗವನ್ನು ಅವನು ಸುತ್ತಿಕೊಳ್ಳುವಾಗ ಕಾಗೆ ಅರಚಿತು. ಜೀಕೆ ಹಾರಿ ಎದ್ದು ಅಮಿತವಾವ ವೇಗದಿಂದ ನರಿ ಅಡಗಿದ ಪೊದೆಯನ್ನು ದಾಟಿಕೊಂಡು ಓಡಿಹೋಯಿತು.

ಆಶಾಭಂಗಗೊಂಡ ರೈತ, ದುಂಡು ದೊಣ್ಣೆಯನ್ನು ಆ ಪೊದರಿನ ಕಡೆಗೆ ಬಲವಾಗಿ ಬೀಸಿ ಒಗೆದ. ಅದು ಸರಿಯಾಗಿ ನರಿಯ ತಲೆಗೆ ಬಡಿದು ಆ ಪೆಟ್ಟಿಗೆ ನರಿ ಕೆವ್ವನೆ ಅರಚಿ ಬಿದ್ದು ಸತ್ತು ಹೋಯಿತು.






೨

[ಕುಂಡಲಿನೀ ದ್ವೀಪದ ರಾಜನಾದ ಚಿತ್ರಸೇನನು ಒಳ್ಳೆಯ ಯಶಸ್ವಿಗಾಗಿ ತೆರಿಗೆಗಳನ್ನು ಅರ್ಧದಷ್ಟು ತಗ್ಗಿಸಿದನು. ಅದರಿಂದಾಗಿ ಖಜಾನೆ ಖಾಲಿಯಾಯಿತು. ಸೇನಾಧಿಪತಿಯ ಸಲಹೆಯಂತೆ ಇತರ ದೇಶಗಳಿಂದ ಧನವನ್ನು ದೋಚಿಕೊಂಡು ಬರಲು, ಕುಂಡಲಿನಿಯ ಸೈನ್ಯಗಳು ಹಡಗುಗಳಲ್ಲಿ ಹೊರಟುವು. ಅದೇ ಸಮಯದಲ್ಲಿ ದಕ್ಷಿಣ ದಿಕ್ಕಿನ ಆಕಾಶದಲ್ಲಿ ಒಂದು ಧೂಮಕೇತು ಕಾಣಿಸಿತು.]

ಧೂಮಕೇತುವನ್ನು ಲಕ್ಷ್ಯಮಾಡದೆ ಕುಂಡಲಿನೀ ರಾಜ್ಯದ ಸೈನ್ಯಗಳು ತುಂಬಿದ ಹಡಗುಗಳು ರೇವಿನಿಂದ ಒಂದೇಸಾರಿ ಹೊರಟು ಸಮುದ್ರದಲ್ಲಿ ಭರದಿಂದ ಹೋಗ ತೊಡಗಿದುವು. ಆಗ ಬೀಸುವ ಗಾಳಿ ಹಡಗುಗಳಿಗೆ ಅನುಕೂಲವಾಗಿತ್ತು. ಸಮುದ್ರವು ತುಂಬಾ ಪ್ರಶಾಂತವಾಗಿತ್ತು.

ಸೈನಿಕರೆಲ್ಲಾ ಅತ್ಯಂತ ಉತ್ಸಾಹದಲ್ಲಿದ್ದರು. ಆದರೆ ಸೇನಾಧಿಪತಿ ಸಮರಸೇನನು ಅವರ ಉತ್ಸಾಹದಲ್ಲಿ ಭಾಗಿಯಾಗಿ ತಿರುಗುತ್ತಿರಲಿಲ್ಲ. ಅವನು ಹಡಗಿನ ಮೇಲೆ ಒಂದು ಮೂಲೆಯಲ್ಲಿ ಎತ್ತರವಾದ ಆಸನದ ಮೇಲೆ ಕುಳಿತುಕೊಂಡು, ದಕ್ಷಿಣ ದಿಕ್ಕಿನಲ್ಲಿ ಹೊಳೆಯುತ್ತಿದ್ದ ಧೂಮಕೇತುವಿನ ಕಡೆಗೇ ನೆಟ್ಟ ದೃಷ್ಟಿಯಿಂದ ನೋಡುತ್ತಿದ್ದನು.

ಅವನು ಹಾಗೇ ನೋಡುತ್ತಿದ್ದಂತೆ, ಆಕಾಶದ ಮೂಲೆಯಲ್ಲಿ ಕರ್‍ರಗಾಗಿ ಕಾಣುತ್ತಿದ್ದ ಕಾರ್ಮೋಡವು ಮೇಲೆದ್ದು ಹರಡಿ ಕಣ್ಣುಮುಚ್ಚಿ ಬಿಡಿಸುವುದರೊಳಗೆ ಧೂಮಕೇತುವನ್ನು ಮುಚ್ಚಿಹಾಕಿತು. ಅದರ ಬೆನ್ನಿಗೇ ಕಗ್ಗತ್ತಲೆಯ ರಾಶಿ ಸುತ್ತುಮುತ್ತಲೂ ಕವಿಯಿತು. ಗಾಳಿಯ ವೇಗ ಹೆಚ್ಚುತ್ತಿರಲು ಸಮುದ್ರವು ಉಕ್ಕೇರುತ್ತಾ ಗರ್ಜಿಸ



ಕೆಳಗೆ ಹೋಗಿ, ನಾನು ಸೇನಾಧಿಪತಿಯಾಗಿ ಅನೇಕಾನೇಕ ಯುದ್ಧಗಳಲ್ಲಿ, ಎಷ್ಟೋ ಭೀಕರ ಅನುಭವಗಳಿಂದ ಹೇಳುತ್ತಿದ್ದೇನೆಂದು ಆ ಸೈನಿಕರಿಗೆ ಧೈರ್ಯ ಹೇಳಿರಿ. ಇದೆಲ್ಲಾ ಪ್ರಕೃತಿ ಸಹಜ. ಯಾವ ಹಾನಿಯೂ ನಮಗಾಗುವುದಿಲ್ಲ" ಎಂದನು.

ಆಮೇಲೆ ಸ್ವಲ್ಪ ಹೊತ್ತಿನವರೆಗೆ ಯಾವ ಬದಲಾವಣೆಯೂ ಕಾಣಲಿಲ್ಲ. ಸಮುದ್ರವು ದೊಡ್ಡ ದೊಡ್ಡ ತೆರೆಗಳನ್ನು ಎಬ್ಬಿಸುತ್ತ ಅಲ್ಲಕಲ್ಲೋಲವಾಗುತ್ತಲೇ ಇದ್ದಿತು. ವಾತಾವರಣವೆಲ್ಲ ಇನ್ನೂ ಕಪ್ಪಗಾಗಿ, ಭಯಂಕರವಾದ ಸುಳಿಗಾಳಿ ಮೇಲಿಂದ ಮೇಲೆ ಬೀಸ ತೊಡಗಿತು.

ಸೇನಾಧಿಪತಿ ಹೇಳಿ ಕಳುಹಿಸಿದ ಧೈರ್ಯದ ಮಾತುಗಳು ಸೈನಿಕರನ್ನು ಗಟ್ಟಿ ನಿಲ್ಲಿಸಲಾರದೆ ಹೋದುವು. ಅವರು ಹಾಹಾಕಾರ ಮಾಡ ತೊಡಗಿದರು. ಗಾಳಿಯ ವೇಗದಿಂದ ಹಡಗುಗಳೆಲ್ಲ ಚೆದರಿ ಗುರಿತಪ್ಪಿ ಸಿಕ್ಕಸಿಕ್ಕಲ್ಲಿಗೆ ಓಡುತ್ತಿದ್ದುವು. ಸೈನಿಕರು ಜೀವ ಉಳಿದರೆ ಬೇಕಾಗುವುದೆಂದು, ಅಗತ್ಯದ ವಸ್ತುಗಳನ್ನು ಎತ್ತಿಕೊಂಡು, ಪ್ರಾಣ ರಕ್ಷಣೆಗಾಗಿ ಹೆಣಗಾಡ ತೊಡಗಿದರು.

ತುಫಾನಿನ ವೇಗವು ಇನ್ನೂ ಹೆಚ್ಚಾಯಿತು. ಹಡಗುಗಳು ನಾವಿಕರ ಸ್ವಾಧೀನ ತಪ್ಪಿ ಒಂದನ್ನೊಂದು ಢಿಕ್ಕೀ ಹೊಡೆಯುತ್ತ ಛಿನ್ನಾಭಿನ್ನವಾಗ ತೊಡಗಿದುವು. ಸಮರಸೇನನು ಪ್ರಯಾಣಿಸುವ ಹಡಗು ಅತ್ಯಂತ ಭದ್ರವಾಗಿ ನಿರ್ಮಿಸಲ್ಪಟ್ಟಿತ್ತು. ಆ ಕಾರಣದಿಂದ ಅದು ಇತರ ಹಡಗುಗಳ ಹೊಡೆತಕ್ಕೆ ತಡೆದುಕೊಂಡು ಮೇಲೆ ಕೆಳಗೆ ತೇಲುತ್ತಾ ಹೋಗುತ್ತಿದ್ದಿತು.

ಈ ಬೀಭತ್ಸವನ್ನು ಈವರೆಗೂ ನೋಡದಿದ್ದ ಸಮರಸೇನನು ಈಗ ಚಲಿಸಿ ಚಿಂತಿಸತೊಡಗಿದನು. ಸುತ್ತುಮುತ್ತಲೂ ಏನಾಗಿದೆ ಎಂದು ತಿಳಿಯಲು ಬೆಳಗಾಗ ಬೇಕಾಗಿತ್ತು. ಎಷ್ಟು ಹಡಗುಗಳು

ತೊಡಗಿತು. ಇದನ್ನೆಲ್ಲ ನೋಡುತ್ತಿದ್ದಂತೆ ಸೈನಿಕರ ಉತ್ಸಾಹ ತಣ್ಣಗಾಗುತ್ತ, ಅಟ್ಟಹಾಸ ತಗ್ಗುತ್ತ ಸ್ತಬ್ಧರಾದರು. ದಿಗಿಲಿನಿಂದ ಎಲ್ಲರ ಎದೆಯೂ ನಡುಗತೊಡಗಿತು.

ಸಮರಸೇನನು ನಿಶ್ಚೇಷ್ಟನಾಗಿ ನೋಡುತ್ತಲೇ ಇದ್ದನು. ಅಷ್ಟರಲ್ಲಿ ನೌಕಾಧಿಪತಿ ಅವನ ಬಳಿಗೆ ಬಂದು, "ಮಹಾ ಸೇನಾನಿಗಳೇ! ಸೈನಿಕರೆಲ್ಲಾ ಭಯಕಂಪಿತರಾಗಿದ್ದಾರೆ. ಅವರಲ್ಲಿ ಅನೇಕರು ತೀರಕ್ಕೆ ಸೇರುವುದು ಒಳ್ಳೇದೆಂದು ಕೂಗಾಡುತ್ತಿದ್ದಾರೆ. ಏನು ಮಾಡಲಿ?" ಎಂದು ಕೇಳಿದನು.

ಸಮರಸೇನನು ಎದ್ದು ನಿಂತು ಒಮ್ಮೆ ಆಕಾಶದ ಕಡೆಗೂ, ಒಮ್ಮೆ ಅಲ್ಲಕಲ್ಲೋಲವಾಗುವ ಸಮುದ್ರದ ಕಡೆಗೂ ನೋಡಿದನು. ಆಮೇಲೆ ನೌಕಾಧಿಪತಿಯನ್ನು ನೋಡಿ, "ಹಾಗೆ ಹೆದರಬೇಕಾಗಿಲ್ಲ. ಕುಂಡಲಿನೀದೇವಿ ಕರುಣಿಸಿದರೆ ಬೇಗದಲ್ಲೇ ಭಯ ನಿವಾರಣೆಯಾಗಿ ಅನುಕೂಲಿಸುತ್ತದೆ. ನೀವು ಬೇಗನೇ

ಮುಳುಗಿದುವೋ ? ಎಷ್ಟು ಸೈನಿಕರು ಸತ್ತರೋ ? ಆ ಜ್ಯೋತಿಷ್ಯನು ಹೇಳಿದಂತೆ. ಇದೇನಾದರೂ ಉತ್ಪಾತ ವಾಗಿದ್ದೀತೆ ? ಅವನು ತನ್ನ ಹಡಗಿನಲ್ಲಿರುವ ಕುಂಡಲಿನೀದೇವಿಯ ವಿಗ್ರಹದ ಮುಂದೆ ಕುಳಿತು ಕೈಮುಗಿದು ಕಾಪಾಡುವಂತೆ ಬೇಡಿಕೊಳ್ಳ ತೊಡಗಿದನು.

ಆಮೇಲೆ ತುಂಬಾ ತಡವಾಗಿ ಸೂರ್ಯೋದಯ ವಾದಂತೆನಿಸಿತು. ಆಕಸ್ಮಿಕವಾಗಿ ಹೊರಟ ಸುಳಿ ಗಾಳಿಯೂ, ಕಾರ್ಮೋಡಗಳೂ ವಿಚ್ಛಿತ್ತಿಯಾಗಿ ಹೋದುವು. ಭಕ್ತಿಯಿಂದ ಮೈಮರೆತು ದೇವಿಯ ಮುಂದೆ ಕುಳಿತಿದ್ದ ಸಮರಸೇನನು, ಏನೋ ಕೂಗನ್ನು ಕೇಳಿ ದಡಕ್ಕನೆದ್ದು ಅತ್ತಿತ್ತ ನೋಡಿದನು. ಕೆಳ ಬದಿಯಲ್ಲಿದ್ದ ಸೈನಿಕರು ಕೋಲಾಹಲವಾಗಿ "ಅಯ್ಯಾ ಸೇನಾನೀ ದೊರೆಗಳೇ ! ಸಮುದ್ರವು ಪ್ರಶಾಂತವಾಗಿದೆ. ತಾವು ಒಮ್ಮೆ ಕೆಳಗೆ ಬಂದು ಮುಂದೇನು ಮಾಡಬೇಕೆಂಬುದನ್ನು ಆಜ್ಞಾಪಿಸ ಬೇಕು" ಎಂದು ಕೂಗುತ್ತಿದ್ದರು.

ಸಮರಸೇನನಿಗೆ ತಲೆಯ ಮೇಲೆ ಹೊತ್ತಿದ್ದ ದೊಡ್ಡ ಭಾರವನ್ನು ಇಳಿಸಿದಂತೆನಿಸಿತು. ಆದರೆ ಆ ಸಂತೋಷವು ಬಹಳ ಹೊತ್ತು ನಿಲ್ಲಲಿಲ್ಲ. ಸುತ್ತಲೂ ನೋಡಿದಾಗ ಒಟ್ಟು ಹೊರಡುವಾಗ ಇದ್ದ ಹಡಗು ಗಳಲ್ಲಿ ಸುಮಾರು ಅರ್ಧ ಭಾಗದಷ್ಟು ಮುಳುಗಿ ಹೋಗಿದ್ದುವು. ಉಳಿದುವು ದೂರ ದೂರ ಸುತ್ತಲೂ ಸಮುದ್ರದಲ್ಲಿ ತೇಲಿಯಾಡುತ್ತಿದ್ದುವು. ಅಲ್ಲಲ್ಲಿ ಹಡಗಿನ ಭಾಗಗಳು ಕಪ್ಪು ಕಪ್ಪಾಗಿ ಕಾಣು ತ್ತಿದ್ದುವು. ಸೈನಿಕರಲ್ಲಿ ಅನೇಕರು ಸಮುದ್ರದಲ್ಲಿ ಮುಳುಗಿ ಸತ್ತಿರಬಹುದು.

ಮುಳುಗದೆ ಉಳಿದು ತೇಲಾಡುತ್ತಿದ್ದ ಹಡಗು ಗಳನ್ನು ಒಂದಾಗಿ ಸೇರಿಸುವುದು ಪ್ರಥಮ ಕರ್ತವ್ಯ ವೆಂದು ಸಮರಸೇನನಿಗೆ ತೋರಿತು. ಕೂಡಲೇ ಹೋಗಿ ತಮ್ಮ ಹಡಗಿಗೆ ಲಂಗರು ಹಾಕಿಸಿದನು.



ಆಮೇಲೆ ದೋಣಿಗಳಲ್ಲಿ ಸೈನಿಕರನ್ನು ದೂರ ದೂರದಲ್ಲಿರುವ ಹಡಗುಗಳ ಕಡೆಗೆ ಕಳುಹಿಸಿ ತಮ್ಮ ಹಡಗಿನ ಕಡೆಗೆ ತರುವಂತೆ ಆಜ್ಞೆ ಮಾಡಿದನು. ಸ್ವಲ್ಪ ಹೊತ್ತಿಗೆ ಎಲ್ಲಾ ಹಡಗುಗಳೂ ಬಂದು ಸೇನಾನಿಯ ಹಡಗಿನ ಸುತ್ತಲೂ ಸೇರಿದುವು. ಸೈನಿಕರೆಲ್ಲಾ ಹಡಗುಗಳ ಮೇಲ್ಭಾಗದಲ್ಲಿ ಬಂದು ನಿಂತು ತಮ್ಮ ಸೇನಾನಿಗೆ ವಂದನೆಗಳನ್ನು ಸಲಿಸಿದರು. ಆ ಬದುಕಿ ಉಳಿದವರೆಲ್ಲ ರಾತ್ರಿಯ ತುಫಾನಿನಿಂದ ನಾನಾಯಾತನೆಗಳಿಗೆ ಒಳಗಾಗಿ ಮರಣದ ಅಂಚಿ ನಿಂದ ಪಾರಾಗಿ ಉಳಿದವರೇ !

ಸಪ್ಪಗೆ ತಲೆ ತಗ್ಗಿಸಿ ನಿಂತ ಸೈನಿಕರ ರೀತಿಯನ್ನು ನೋಡಿ ಸಮರಸೇನನು, ಪರಿಸ್ಥಿತಿ ಎಷ್ಟು ನಿರುತ್ಸಾಹವಾದುದೆಂಬುದನ್ನು ಊಹಿಸಿದನು. ರಾತ್ರಿ ಯಲ್ಲಿ ಎದ್ದು, ಬಂದ ಘೋರದಿಂದ ಸೈನಿಕರಿಗೆ ಸಮುದ್ರವೆಂದರೆ ಮರಣದ ಹೆದೆಯಾಗಿತ್ತು. ಆದುದರಿಂದ ಇನ್ನೂ ಸಮುದ್ರದ ಮೇಲೆ ಕಾಲ



ಕಳೆಯುವುದೆಂದರೆ ಸಾಧ್ಯವಾಗದ ವಿಷಯವಾಗಿತ್ತು. ತಾವು ಈಗ ಸಮುದ್ರದ ಮೇಲೆ ಯಾವ ಪ್ರಾಂತದಲ್ಲಿದ್ದೇವೆಂಬುದು ಗೊತ್ತಾಗುತ್ತಿದ್ದಿಲ್ಲ. ಯಾವುದಾದರೂ ತೀರವು ಎಲ್ಲಿದೆಯೋ ? ಯಾವುದೋ ಒಂದು ಭೂಮಿಯ ಅಂಚು ಕಂಡರೆ ಸಾಕಾಗಿತ್ತು.

ಸಮರಸೇನನು ಸೈನಿಕನೊಬ್ಬನನ್ನು ಕರೆದು ತೆರೆಚಾಪೆಯ ನೀಳ್ಗಂಬದ ಮೇಲೆ ಹತ್ತಿ ಎಲ್ಲಿಯಾದರೂ ಭೂಪ್ರದೇಶ ಕಾಣುವುದೋ ನೋಡುವಂತೆ ಹೇಳಿದನು.

ಆ ಸೈನಿಕನು ಆ ಕಂಬದ ತುದಿಗೆ ಹತ್ತಿದನು. ಎಲ್ಲರೂ ಅವನ ಮುಖದ ಕಡೆಗೇ ನೋಡುತ್ತಿದ್ದರು. ಆ ಸೈನಿಕನು ಸ್ವಲ್ಪಹೊತ್ತು ಸುತ್ತಲೂ ನೋಡಿ, "ಹತ್ತಿರದಲ್ಲೆಲ್ಲಿಯೂ ಭೂಪ್ರದೇಶ ಕಾಣುವುದಿಲ್ಲ. ಆದರೆ ಪೂರ್ವ ದಿಕ್ಕಿನಲ್ಲಿ ಬಹಳ ದೂರದಲ್ಲಿ ಹಕ್ಕಿಗಳು ಹಾರುವ ಹಾಗೆ ಕಾಣುತದೆ!" ಎಂದು ಕೂಗಿ ಹೇಳಿದನು.

ಆ ಮಾತು ಕೇಳಿ ಸಮರಸೇನನು "ಜೈ ಕುಂಡಲಿನೀ ಮಹಾದೇವಿಗೆ!" ಎಂದು ಉತ್ಸಾಹದಿಂದ ಕೂಗಿದನು. ಅವನನ್ನು ಅನುಸರಿಸಿ ಎಲ್ಲಾ ಸೈನಿಕರೂ ಉತ್ಸಾಹದಿಂದ ಮಹಾದೇವಿಗೆ ಜಯಜಯಾಕಾರ ಮಾಡಿದರು.

ಅನಂತರ ಸೇನಾನಿಯ ಆಜ್ಞೆಯಂತೆ ಹಡಗುಗಳೆಲ್ಲಾ ಹಕ್ಕಿಗಳು ಹಾರುವಂತೆ ಕಂಡ ಪೂರ್ವ ದಿಕ್ಕಿನ ಕಡೆಗೆ ಹೋಗತೊಡಗಿದುವು. ನೀಳ್ಗಂಬದ ಮೇಲೇರಿದ ಸೈನಿಕನು ಅಲ್ಲೇ ಇದ್ದು ಹಡಗುಗಳಿಗೆ ದಾರಿ ತೋರಿಸುತ್ತಿದ್ದನು. ಸ್ವಲ್ಪ ಹೊತ್ತಿಗೆ ನಡುಮಧ್ಯಾಹ್ನವಾಯಿತು. ಕ್ರಮವಾಗಿ ಸೂರ್ಯನು ಪಶ್ಚಿಮಕ್ಕೆ ವಾಲುತ್ತಾ ಹೋಗುತ್ತಿರಲು ಭೂಮಿಯ ಗುರುತು ಕಾಣದುದರಿಂದ ಸೈನಿಕರಲ್ಲಿ ಮತ್ತೆ ನಿರುತ್ಸಾಹವೂ ದಿಗಿಲೂ ತಲೆಯೆತ್ತ ತೊಡಗಿದುವು. "ಅಯ್ಯೋ ! ಸೂರ್ಯ ಮುಳುಗಲಿಕ್ಕಾಯಿತು !



ಭೂಮಿ ಬರೀ ಭ್ರಮೆಯಾಯಿತು!" ಎಂದು ಒಬ್ಬ ಸೈನಿಕನು ಕೂಗಿದನು. "ಅಯ್ಯಯ್ಯೋ! ಇನ್ನು ಸ್ವಲ್ಪ ಹೊತ್ತಿಗೆ ಕತ್ತಲೆ ಬರುತ್ತೆ. ಈ ಮಹಾಸಮುದ್ರದ ನಡುವಿನಲ್ಲಿ ದಾರೀ ದಿಕ್ಕೂ ತಿಳಿಯದೆ ಮತ್ತೆ ಏನು ಅಪಾಯ ಬರುತ್ತೋ! ನಾವೂ ಸಮುದ್ರಕ್ಕೆ ಬಲಿಯಾಗಿಬಿತ್ತೇವೇನೋ?" ಎಂದು ಹೇಳುತ್ತ ಉಳಿದ ಸೈನಿಕರು ಭೀತರಾಗ ತೊಡಗಿದರು.

ಇದ್ದಕ್ಕಿದ್ದ ಹಾಗೆ ಕಂಬದ ತುದಿಯಲ್ಲಿದ್ದ ಸೈನಿಕನು, "ಅಗೋಗೋ! ಭೂಮಿ! ಹತ್ತಿರದಲ್ಲೇ ಇದೆ! ಹೋಗಲಿ ಹೀಗೆಯೇ!" ಎಂದು ಉತ್ಕಂಠದಿಂದ ಕೂಗಿದನು. ಸೈನಿಕರಿಗೆಲ್ಲ ಒಮ್ಮೆಗೇ ಉತ್ಸಾಹವೇರಿತು.

ಎಲ್ಲ ಹಡಗುಗಳೂ ಭೂಮಿ ಕಾಣುವ ದಿಕ್ಕಿಗೆ ಭರದಿಂದ ಸಾಗತೊಡಗಿದುವು. ಸೂರ್ಯನು ಮುಳುಗಿದನು. ಸ್ವಲ್ಪ ಹೊತ್ತಿಗೆ ಎಲ್ಲಾ ಹಡಗುಗಳೂ ತೀರವನ್ನು ತಲಪಿದುವು. ಅದು ಯಾವುದೋ ಒಂದು ದ್ವೀಪವಾಗಿರಬೇಕು. ಸೈನಿಕರೆಲ್ಲಾ ಕೆಳಗಿಳಿಯಲು ಆತುರಪಡುತ್ತಿದ್ದರು. ಅದನ್ನು ತಿಳಿದಿದ್ದ ಸಮರಸೇನನು, "ನನ್ನ ಅಪ್ಪಣೆ ಇಲ್ಲದೆ ಯಾರೂ ಹಡಗಿನಿಂದ ಇಳಿಯಕೂಡದು. ಜಾಗ್ರತೆ!" ಎಂದು ಆಜ್ಞೆ ಮಾಡಿದನು.

ನಿಜವಾಗಿ ಅವರು ಬಂದು ಸೇರಿರುವುದು ಸಮುದ್ರದ ಮಧ್ಯದಲ್ಲಿರುವ ಒಂದು ಮಹಾ ದ್ವೀಪವಾಗಿತ್ತು. ಆ ದ್ವೀಪದೊಳಗಿನ ಪರ್ವತ ಪಂಕ್ತಿಗಳು ಸಮುದ್ರದೊಳಗೂ ಒತ್ತಿಕೊಂಡು ಹೋಗಿದ್ದುವು. ಪರ್ವತಗಳಲ್ಲಿ ಮಹಾ ವೃಕ್ಷಗಳು ತುಂಬಿಕೊಂಡಿದ್ದುವು. ವೃಕ್ಷಗಳ ನಡುವೆ ಚಿತ್ರ ವಿಚಿತ್ರವಾದ ವನ್ಯ ಮೃಗಗಳೂ ಇರಬಹುದು. ಕತ್ತಲೆಯಲ್ಲಿ ಮಸಕು ಮಸಕಾಗಿ ಕಾಣುವಷ್ಟರ ಮಟ್ಟಿಗೆ ಆ ದ್ವೀಪದ ನೆಲೆಯನ್ನು ಊಹಿಸಿಕೊಂಡ ಸಮರಸೇನನು, ಜಾಗರೂಕತೆಯಿಲ್ಲದೆ ದುಡುಕಿ ಇಳಿಯುವುದರಿಂದ ಅಪಾಯ ಉಂಟಾಗಬಹುದೆಂದು ಅನುಮಾನಿಸಿದನು.

ಹಡಗುಗಳಲ್ಲಿರುವ ಸೈನಿಕರನ್ನು ಎರಡು ಭಾಗ ಮಾಡಿ, ಅವರಲ್ಲಿ ಕೆಲವರನ್ನು ಚಿಕ್ಕಚಿಕ್ಕ ದೋಣಿಗಳಲ್ಲಿ ದ್ವೀಪದ ತೀರಕ್ಕೆ ಕಳುಹಿಸುವುದು ಒಳ್ಳೆಯದೆಂದು ಸಮರಸೇನನಿಗೆ ತೋರಿತು. ಅವರು ಹೋಗಿ ದ್ವೀಪದೊಳಗಿನ ಪರಿಸ್ಥಿತಿಗಳನ್ನು ತಿಳಿದು ಬಂದ ಮೇಲೆ ಉಳಿದವರನ್ನು ಕಳುಹಿಸುವುದು ಒಳ್ಳೆಯದೆಂದು ಸಮರಸೇನನು ಯೋಚಿಸಿದನು.

ಆದರೆ ದ್ವೀಪದೊಳಗೆ ಹೋಗಿ ಪರಿಸ್ಥಿತಿಗಳನ್ನು ಅಳೆದು ನೋಡಿ ಹಿಂದಿರುಗಿ ಬರಲು ಸಮರ್ಥರಾದ ಸೈನಿಕರು ಯಾರು? ಅರಣ್ಯ ಪರ್ವತಗಳಿಂದ ಕೂಡಿದ ಹೊಸ ಪ್ರದೇಶಕ್ಕೆ ಹೋಗಿ, ಅದು ಎಂತಹ ಸ್ಥಳವೆಂದು ತಿಳಿದುಕೊಂಡು ಬರಬೇಕಾದರೆ ಧೈರ್ಯ ಸಾಹಸಗಳ ಜತೆಗೆ ಸಮಯೋಚಿತವಾದ ಯುಕ್ತಿಗಳನ್ನು ಪ್ರಯೋಗಿಸುವ ಯೋಚನಾ



ಶಕ್ತಿಯೂ ಇರಬೇಕು. ಇದನ್ನು ಯೋಚನೆಮಾಡುವಾಗ ಅಂತಹ ಯಾವ ಸೈನಿಕನೂ ತೋರಲಿಲ್ಲ. ತಾನೇ ಸ್ವಯಂ ಹೋಗಿ ಬರುವುದೇ ಒಳ್ಳೆಯದೆಂದು ಸಮರಸೇನನಿಗೆ ತೋರಿತು. ಅವನು ತನ್ನ ಖಾಸಾ ಸೈನಿಕರಲ್ಲಿ ಆರು ಮಂದಿಯನ್ನು ಆರಿಸಿಕೊಂಡು ಚಿಕ್ಕದೋಣಿಯಲ್ಲಿ ಹೊರಟು ತೀರಕ್ಕೆ ಹೋಗಿ ಭೂಮಿಯ ಮಣ್ಣಿಗೆ ಇಳಿದನು.

ಎಲ್ಲಿಯೂ ನರಸಂಚಾರವಿದ್ದಂತೆ ಕಾಣಲಿಲ್ಲ. ಮಾನವರು ನಡೆದಾಡಿದ ಹಜ್ಜೆಯ ಗುರುತುಗಳೂ ಅಲ್ಲಿ ಕಾಣಲಿಲ್ಲ. ಕಾಣಲಿಲ್ಲವೆಂಬಷ್ಟು ಪ್ರಕಾಶವು ಅಲ್ಲೆಲ್ಲಾ ಹರಡಿರುವುದನ್ನು ನೋಡಿ ಸಮರಸೇನನಿಗೆ ಆಶ್ಚರ್ಯವಾಯಿತು. ಸಮುದ್ರವೂ ಶುಭ್ರಾಕಾಶದ ಪ್ರಕಾಶವೂ ಒಂದರ ಮೇಲೊಂದು ಪ್ರತಿಬಿಂಬಿಸುವ ಕನ್ನಡಿಯಂತಾಗಿ ಈ ಪ್ರಕಾಶ ಬಂದಿರಬಹುದೇ? ಒಂದು ಕಡೆ ಆಕಾಶದಿಂದ ಪ್ರಕಾಶ ಪುಂಜವೇ ಈ ದ್ವೀಪದ ಮೇಲೆ, ಬೀಳುವಂತೆ ಕಾಣುತ್ತಿತ್ತು. ಅದು ಈ ದಿಕ್ಕಿಗೇ ಬಂದಿದ್ದ ಧೂಮಕೇತುವಿನಿಂದ ಸುರಿಯುವ ಪ್ರಕಾಶವೆಂದು ಸಮರಸೇನನು ತಿಳಿದನು. ಅದು ತಮ್ಮನ್ನೇ ಬೆನ್ನಟ್ಟಿ ಬಂದಂತಿದೆ. ಸಮರಸೇನನು ಧೈರ್ಯದಿಂದ ಕತ್ತಿಯನ್ನು ಹಿಡಿದುಕೊಂಡು ಮುಂದೆ ಮುಂದೆ ಸಾಗಿದನು. ಅವನಿಗೆ ಇನ್ನೊಂದು ಸಂದೇಹವಾಯಿತು. ಅಲ್ಲಿಯ ಮನುಷ್ಯರು ತಮ್ಮ ಸುಳಿವನ್ನು ಕಂಡು ಮರಗಳ ಹಿಂದೆ ಅಡಗಿ ತಮ್ಮ ಮೇಲೆ ಬಾಣ ಪ್ರಯೋಗ ಮಾಡಿದರೆ ಏನು ಗತಿ?

ಸರ್ವ ಜಾಗ್ರತೆಯಿಂದ ನಡೆಯುತ್ತಿದ್ದ ಸಮರಸೇನನಿಗೆ ಸುತ್ತಲೂ ಕವಿದ ನಿಶ್ಶಬ್ದತೆಯನ್ನು ಭೇದಿಸಿಕೊಂಡು ಹಠಾತ್ತಾಗಿ ಎದ್ದ ಭಯಂಕರ ಗರ್ಜನೆಯೊಂದು ಕೇಳಿಸಿತು. ಮತ್ತೆ ನಿಶ್ಶಬ್ದತೆ. ಸೈನಿಕನೊಬ್ಬನು ಸಣ್ಣದನಿಯಿಂದ "ಸೇನಾನಿಯವರೆ, ಇದು ಯಾವ ಪ್ರಾಣಿಯ ಶಬ್ದವೋ? ವಿಕೃತವಾಗಿ ಭಯಂಕರವಾಗಿದೆ. ಇಂಥಾ ಶಬ್ದ ಈವರೆಗೂ ನಾವು ಕೇಳಿಲ್ಲ" ಎಂದನು ನಡುಗುವ ಕಂಠದಿಂದ.

ಉಳಿದ ಸೈನಿಕರು ಕೂಡಾ ಆಚೀಚೆ ನೋಡುತ್ತ ನಡುಗುತ್ತಿದ್ದರು. ಸಮರಸೇನನು ಅವರಿಗೆ ಧೈರ್ಯ ಹೇಳಿ ಮುಂದೆಮುಂದೆ ನಡೆಯುತ್ತಿರಲು. ಸೈನಿಕರೂ ಅವನನ್ನು ಅನುಸರಿಸಿದರು. ಸ್ವಲ್ಪ ಹೊತ್ತಿಗೆ ಒಂದು ಸ್ಥಳದಲ್ಲಿ ನಿಂತರು. ಅವರ ಸುತ್ತಲೂ ಗುಂಪು ಗುಂಪಾಗಿ ಮರಗಳಿದ್ದುವು. ಒಂದು ಕಡೆ ತುಸುದೂರದಲ್ಲಿ ದೊಡ್ಡದೊಂದು ಕೊಳವಿರುವುದು ಕಾಣುತ್ತಿತ್ತು. ಆ ಕೊಳದ ಹತ್ತಿರ ಕಣ್ಣಿಗೆ ಕಾಣುವ ಭಯಂಕರ ದೃಶ್ಯವನ್ನು ನೋಡಿ ಅವರೆಲ್ಲ ನಿಶ್ಚೇಷ್ಟಿತರಾದರು.

ಕೊಳದ ತೀರದಲ್ಲಿ ಎರಡು ವಿಕೃತ ಪ್ರಾಣಿಗಳು ಒಂದರ ಮೇಲೊಂದು ಬಿದ್ದು ಹೋರಾಡುತ್ತಿದ್ದುವು. ಮತ್ತೆ ಕೆಲವು ಪ್ರಾಣಿಗಳು ದೂರದಲ್ಲಿ ಮರಗಳ ಕೆಳಗೆ ನಿಂತು ಆ ಹೋರಾಟವನ್ನು

ನೋಡುತ್ತಿದ್ದುವು. ಅಕ್ಕಪಕ್ಕದಲ್ಲಿರುವ ಮರಗಳ ಕೊಂಬೆಯಲ್ಲಿ ಮನುಷ್ಯಾಕಾರದಲ್ಲಿರುವ ದೊಡ್ಡ ದೊಡ್ಡ ನರವಾನರಗಳು, ಆ ಹೋರಾಟವನ್ನು ನೋಡುತ್ತ, ಮಧ್ಯೆ ಮಧ್ಯೆ ತಮ್ಮೊಳಗೇನೋ ಮಾತಾಡಿಕೊಳ್ಳುತ್ತಿದ್ದುವು. ಅವುಗಳ ಕೈಗಳಲ್ಲಿ ಕಲ್ಲಿನಿಂದಾದ ಬೇರೆಬೇರೆ ಆಕೃತಿಯ ಮೊರಟಾದ ಆಯುಧಗಳಿದ್ದುವು.

ಸಮರಸೇನನು ಆ ದೃಶ್ಯಗಳನ್ನು ಸೈನಿಕರಿಗೆ ತೋರಿಸುತ್ತ, "ನಿಜಕ್ಕೂ ಅಲ್ಲಿರುವುದೆಲ್ಲವೂ ವಿಚಿತ್ರ ಪ್ರಾಣಿಗಳೇ. ಆ ಮರದಲ್ಲಿರುವಂಥವು ನರರೂ ಅಲ್ಲ, ವಾನರರೂ ಅಲ್ಲ. ಶಿಲಾಯುಗದಲ್ಲಿದ್ದ ಮಾನವರನ್ನೇ ನಾವೀಗ ನೋಡುತ್ತಿದ್ದೇವೆ. ಇಲ್ಲಿ ಹೋರಾಡುವ ಪ್ರಾಣಿಗಳು ಅನೇಕ ಲಕ್ಷ ವರ್ಷಗಳಷ್ಟು ಹಿಂದಿನವು!" ಎಂದನು.

ಅದಕ್ಕೇನು ಹೇಳಬೇಕೆಂದು ಆ ಸೈನಿಕರಿಗೆ ತೋರಲಿಲ್ಲ. ಇಷ್ಟೊಂದು ವಿಲಕ್ಷಣ ಭಯಂಕರವಾದ ದ್ವೀಪದಲ್ಲಿ ದೋಚಿಕೊಂಡು ಹೋಗಲು ಧನರಾಶಿ ಗಳಿರಲು ಸಾಧ್ಯವೆ? ಅಸಲು ಜೀವ ಉಳಿಸಿಕೊಂಡು ಹೋಗುವುದೇ ದೊಡ್ಡ ಮಾತು.

ಸೇನಾನಿ ಸಮರಸೇನನ ಮನಸ್ಸೂ ಏನೇನೋ ಯೋಚಿಸಿಕೊಂಡಿದ್ದಿತು. ಕುಂಡಲಿನೀ ರಾಜ್ಯದ ಧನಾಗಾರವನ್ನು ತುಂಬಿಸಲು ದ್ವೀಪ ರಾಜ್ಯಗಳನ್ನು ಕೊಳ್ಳೆ ಹೊಡೆಯಲು ಹೊರಟು, ಅರ್ಧದಷ್ಟು ಬಲವನ್ನು ಸಮುದ್ರಕ್ಕೆ ಬಲಿಗೊಟ್ಟು, ಯಾವುದೋ ಭಯಂಕರ ದ್ವೀಪಕ್ಕೆ ತಲಪಿ ಸಿಕ್ಕಿಕೊಂಡೆವಲ್ಲಾ? ಮುಂದಿನ ಕರ್ತವ್ಯವಾದರೂ ಏನು? ಇಲ್ಲಿನ ಈ ವಿಚಿತ್ರ ಪ್ರಾಣಿಗಳು ತಮ್ಮನ್ನು ನೋಡಿಬಿಟ್ಟರೆ ಏನು ಮಾಡುವುವೋ?

ಕೊಳದ ತೀರದಲ್ಲಿ ಘೋರಾಡುತ್ತಿದ್ದ ಪ್ರಾಣಿಗಳ ಕಾದಾಟ ಉಚ್ಚಘಟ್ಟಕ್ಕೆ ಮುಟ್ಟಿತು. ನಿಶ್ಶಬ್ದತೆಯನ್ನು ಸೀಳಿಕೊಂಡು ಬರುವ ಅವುಗಳ ವಿಕೃತವಾದ ಆರ್ಭಟೆಯನ್ನು ಕೇಳಿ ಆನೆಗಳು ದೂರ ದೂರ ಓಡತೊಡಗಿದುವು. ಹಾಗೆ ಓಡುವಾಗ ಆನೆಗಳ ಗುಂಪಿನಿಂದ ಬೇರ್ಪಟ್ಟ ಪರ್ವತಾಕಾರದ ಒಂದು ಆನೆ ಅಡ್ಡಕ್ಕೆ ತಿರುಗಿ ದೊಡ್ಡ ಹಜ್ಜೆಗಳಿಂದ ಓಡುತ್ತಾ ಸಮರಸೇನನೂ ಸೈನಿಕರೂ ಅಡಗಿನಿಂತಿರುವ ಮರಗಳ ಕಡೆಗೇ ಬರತೊಡಗಿತು.

ಸಮರಸೇನನು ಸೈನಿಕರಿಗೆ ಸನ್ನೆ ಮಾಡಿ ಪಕ್ಕದಲ್ಲಿದ್ದ ಮರದ ಮೇಲಕ್ಕೆ ಹಾರಿ ಸರಸರನೆ ಮೇಲೇರಿದನು. ಸೈನಿಕರೂ ಅವನನ್ನು ಅನುಸರಿಸಿ ಮರವನ್ನೇರಿದರು. ಅಷ್ಟರಲ್ಲಿ ಅಲ್ಲೆಲ್ಲಿಯೋ ಹೊಂಚಿಕೊಂಡಿದ್ದ ಎರಡು ಸಿಂಹಗಳು ಭಯಂಕರವಾಗಿ ಗರ್ಜಿಸುತ್ತ ಆನೆಯ ಮೇಲಕ್ಕೆ ಒಂದೇಸಾರಿ ಹಾರಿದುವು. —(ಇನ್ನೂ ಇದೆ)





# ವಾತ್ಸಲ್ಯ

**ಹೇ**ಳಿದ ಮಾತನ್ನು ನಡೆಸಿಯೇ ತೀರುವೆನೆಂಬ ದೃಢ ನಿರ್ಧಾರವನ್ನು ಕೈಕೊಂಡವನಾದ ರಾಜಾ ತ್ರಿವಿಕ್ರಮನು ಮತ್ತೆ ಮರದ ಬಳಿಗೆ ಹೋಗಿ ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ಕೆಳಗಿಳಿಸಿ, ತನ್ನ ಭುಜದ ಮೇಲೆ ಹಾಕಿಕೊಂಡು ಎಂದಿನಂತೆ ಮೌನ ಮುದ್ರೆಯಿಂದ ಸ್ಮಶಾನದಲ್ಲಿ ನಡೆಯುತೊಡಗಿದನು. ಆಗ ಶವದೊಳಗೆ ಸೇರಿಕೊಂಡಿದ್ದ ಬೇತಾಳವು ಮಾತಾಡಲು ತೊಡಗಿ. "ಎಲೈ ಮಹಾರಾಜನೇ. ನಿನ್ನಂಥಾ ರಾಜರು ರಾಜನೀತಿಯ ಹೊರತು ಮತ್ತೇನನ್ನೂ ಪಾಲಿಸಲಾರರೆಂದು ತೋರುತ್ತದೆ. ಆದರೆ ರಾಜಕೀಯವಾಗಿ ವಿಷಮಪರಿಸ್ಥಿತಿಯನ್ನು ಎದುರಿಸುವಂತಹ ರಾಜರು ಸಹ ವಾತ್ಸಲ್ಯಕ್ಕೆ ದಾಸರಾಗುವ ರವಿವರ್ಮ ರಾಜನಂತೆ ನೀನೂ ಯಾವನ ವಾತ್ಸಲ್ಯಕ್ಕೋ ದಾಸನಾಗಿರಬಹುದು. ನಿನಗೆ ದಾರಿಯ ಶ್ರಮ ತಿಳಿಯದಂತೆ ಆ ರವಿವರ್ಮನ ಕಥೆಯನ್ನು ಹೇಳುತ್ತೇನೆ. ಕೇಳುತ್ತಾ ನಡೆ" ಎಂದು ಹೀಗೆ ಕಥೆಯನ್ನು ಪ್ರಾರಂಭಿಸಿತು :

ರವಿವರ್ಮನು ಅತ್ಯಂತ ಬಲಶಾಲಿಯಾದ ರಾಜನಾಗಿದ್ದನು. ಅವನು ವಿಜಯಶೇಖರನೆಂಬ ರಾಜನನ್ನು

ಬೇತಾಳಕಥೆಗಳು?...

ಯುದ್ಧದಲ್ಲಿ ಅವಲೀಲೆಯಾಗಿ ಸೋಲಿಸಿ, ಅವನ ರಾಜ್ಯವನ್ನು ತನ್ನದು ಮಾಡಿಕೊಂಡನು. ವಿಜಯ ಶೇಖರನು ಯುದ್ಧದಲ್ಲಿ ವೀರೋಚಿತವಾಗಿ ಹೋರಾಡಿ, ತನ್ನ ಪ್ರಾಣವನ್ನೇ ಯುದ್ಧರಂಗದಲ್ಲಿ ಸಮರ್ಪಿಸಿದ್ದನು. ಈ ಸಮಾಚಾರ ಕೇಳಿ, ಮಗುವನ್ನು ಹೆತ್ತು, ಬಾಣಂತಿಯಾಗಿ ಮಲಗಿದ್ದ ಅವನ ಪತ್ನಿ ಎದೆಯೊಡೆದು ಸತ್ತುಹೋದಳು. ರವಿವರ್ಮ ರಾಜನಿಗೆ ಮಕ್ಕಳಿಲ್ಲದ ಕಾರಣದಿಂದ, ವಿಜಯಶೇಖರನ ಮಗನಿಗೆ ವಿಜಯವರ್ಮನೆಂದು ಹೆಸರಿಟ್ಟು ತನ್ನ ಸ್ವಂತ ಮಗನ ಹಾಗೇ ನೋಡತೊಡಗಿದನು.

ತರುವಾಯ ಸ್ವಲ್ಪಕಾಲದ ಮೇಲೆ ರವಿವರ್ಮನಿಗೆ ಒಬ್ಬಳು ಮಗಳು ಹುಟ್ಟಿದಳು. ಆದರೂ ರವಿವರ್ಮನಿಗೆ ವಿಜಯವರ್ಮನ ಮೇಲೆ ಲವಲೇಶವೂ ಪುತ್ರವಾತ್ಸಲ್ಯ ತಗ್ಗಲಿಲ್ಲ. ರಾಜನಿಗೆ ಮಗಳು ಹುಟ್ಟಿದುದರಿಂದ ವಿಜಯವರ್ಮನು ಅನಾಥನಾಗುವನೆಂದು ಅನೇಕರು ಭಾವಿಸಿಕೊಂಡುದು ಸುಳ್ಳಾಯಿತು. ರವಿವರ್ಮನು ತನ್ನ ಮಗಳನ್ನೂ, ವಿಜಯವರ್ಮನನ್ನೂ ಏನೂ ವ್ಯತ್ಯಾಸ ತೋರಿಸದೆ ಸರಿಸಮ ದೃಷ್ಟಿಯಿಂದ ನೋಡುತ್ತ ಬೆಳೆಯಿಸತೊಡಗಿದನು.

ರವಿವರ್ಮನ ಮಗಳಿಗೆ ಮದುವೆಯ ವಯಸ್ಸು ಬಂದಿತು. ರವಿವರ್ಮ ರಾಜನು ತನ್ನ ಕುಮಾರಿಗೆ ಸ್ವಯಂವರವನ್ನು ನಿರ್ಧರಿಸಿ, ಸ್ವಯಂವರದಲ್ಲಿ ಆರಿಸಲ್ಪಡುವ ಅಳಿಯನಿಗೆ ಅರ್ಧರಾಜ್ಯವನ್ನು ಕೊಡುವುದಾಗಿಯೂ ಪ್ರಕಟಿಸುತ್ತ ಆಹ್ವಾನ ಕಳುಹಿಸಿದನು. ಇದನ್ನೆಲ್ಲ ತಿಳಿದು ವಿಜಯವರ್ಮನಲ್ಲಿ ಯಾವ ಚಿಂತೆಯೂ ಉಂಟಾಗಲಿಲ್ಲ. ಆದರೆ ಹೊಸತಾಗಿ ಸೇನಾಪತಿಯಾಗಿ ಬಂದಿದ್ದ ಭೂಪತಿ ಎಂಬವನನ್ನು ಆ ಸ್ವಯಂವರ ವಿಷಯವು ತುಂಬಾ ನೋಯಿಸಿತು. ಅವನು ವಿಜಯವರ್ಮನೊಂದಿಗೆ ಸ್ನೇಹ ಮಾಡಿಕೊಂಡು, ಅವನ ಹಿತಚಿಂತಕನ ಹಾಗೆ ರವಿವರ್ಮ ರಾಜನ ಮೇಲೆ ಇಲ್ಲದ ಹೊಲ್ಲದ ವಿಷಯಗಳನ್ನು ಕಲ್ಪಿಸಿ ಹೇಳುತ್ತಾ ಬಂದನು.

ಹಾಗೆ ಹೇಳುತ್ತಾ ಒಂದುಸಾರಿ ವಿಜಯವರ್ಮನೊಂದಿಗೆ, "ಎಷ್ಟಾದರೂ ನೀನು ಈ ರಾಜನಿಗೆ



ಸಾಕು ಮಗತಾನೇ? ಅದೇ ಅವನ ಸ್ವಂತ ಮಗನಾಗಿರುತ್ತಿದ್ದರೆ ನಿನಗೆ ಬರಬೇಕಾದ ರಾಜ್ಯದಲ್ಲಿ ಅರ್ಧಭಾಗವನ್ನು ತೆಗೆದು ಬರಲಿರುವ ಅಳಿಯನಿಗೆ ಕೊಡುತ್ತಾನೇನು? ನಿಜ ಹೇಳುವುದಾದರೆ ಈ ರಾಜ್ಯವು ನಿನ್ನ ತಂದೆಯದು. ಆ ವಿಧವಾಗಿ ನೋಡಿದರೆ ಈ ರಾಜ್ಯವೆಲ್ಲವೂ ನಿನ್ನದೇ. ಈಗ ನೀನು ಸುಮ್ಮನಿರದೆ ಸ್ವಲ್ಪ ಮಾತ್ರ ಸಾಹಸ ತೋರಿಸಿದರೆ ಪೂರ್ತಿ ರಾಜ್ಯವೂ ನಿನಗೇ ದಕ್ಕುತ್ತದೆ. ಅದಕ್ಕೆ ಬೇಕಾದ ಸಹಾಯವನ್ನು ನಾನು ಮಾಡುತ್ತೇನೆ. ನೀನು ಮಾತ್ರ ಗಟ್ಟಿಯಾಗಿದ್ದರೆ ಸಾಕು " ಎಂದನು.

"ಒಂದುವೇಳೆ ನಾವೇನೋ ತಂತ್ರಮಾಡುವ ಸಂಗತಿ ರಾಜನಿಗೆ ತಿಳಿದುಬಿಟ್ಟರೆ, ನಮ್ಮ ತಂತ್ರವನ್ನು ಭಗ್ನಮಾಡುವುದು ಮಾತ್ರವಲ್ಲ, ವಿಶ್ವಾಸಘಾತುಕರಾದ ನಮಗೆ ಮರಣದಂಡನೆ ಕೂಡಾ ಕೊಡಬಹುದು. ಇದಕ್ಕೇನು ಹೇಳುವೆ? " ಎಂದು ವಿಜಯವರ್ಮನು ಕೇಳಿದನು. "ಆ ಭಯವೇ ನಿನಗೆ ಬೇಡ. ನಮ್ಮ ತಂತ್ರವು ರಾಜನಿಗೆ ತಿಳಿಯಿತೆಂದು ಅನುಮಾನ ಬಂದ ಮರುಕ್ಷಣದಲ್ಲೇ ರಹಸ್ಯಮಾರ್ಗದ ಮೂಲಕ ನಾವು ನೆರೆ ದೇಶದ ರಾಜನಾದ ನರಸಿಂಹನ ಬಳಿಗೆ ಹೋಗಿ, ಆತನ ಸಹಾಯದಿಂದ ಈ ರಾಜಭವನವನ್ನು ಸುಲಭವಾಗಿ ವಶಪಡಿಸಿಕೊಳ್ಳುತ್ತೇವೆ. ನಿನಗೆ ಅಂತಃಪುರದ ಎಲ್ಲ ರಹಸ್ಯಗಳೂ ಗೊತ್ತಿದೆಯಷ್ಟೆ? ಮತ್ತೇಕೆ ಇಲ್ಲದ ಅನುಮಾನ ? " ಎಂದನು ಭೂಪತಿ. "ಅದೆಲ್ಲ ಗೊತ್ತಿದೆ, ಸರಿ " ಎಂದನು ವಿಜಯವರ್ಮ.

ಅದೇ ದಿನ ಸಾಯಂಕಾಲ ರವಿವರ್ಮ ರಾಜನು ಉದ್ಯಾನದಲ್ಲಿ ವಿಹರಿಸಿಕೊಂಡಿರುವಾಗ, ಅಂಚೆ ಹಕ್ಕಿಯಾದ ಪಾರಿವಾಳವು ಅವನ ಭುಜದ ಮೇಲೆ ಎರಗಿತು. ಅದರ ಕೊರಳಿಗೆ ಕಟ್ಟಿದ ಪತ್ರದಲ್ಲಿ, " ಈ ದಿನ ರಾತ್ರಿ ರವಿವರ್ಮ ರಾಜನನ್ನು ಕೊಲ್ಲಲು ಒಂದು ಗಟ್ಟಿಪ್ರಯತ್ನ ನಡೆಯುತ್ತದೆ. ವಿಜಯವರ್ಮನು ಭೂಪತಿಯೊಂದಿಗೆ ಕೂಡಿ ಒಂದು ತಂತ್ರದ ಬಲೆಯನ್ನು ಸಿದ್ಧಪಡಿಸಿದ್ದಾನೆ " ಎಂದು ಬರೆಯಲಾಗಿತ್ತು.

ರವಿವರ್ಮ ಕೂಡಲೇ ಉದ್ಯಾನದಿಂದ ಹಿಂದಿರುಗಿ ಅಂತಃಪುರದ ರಕ್ಷಕರಿಗೆಲ್ಲ ಎಚ್ಚರಿಕೆ ಹೊರಡಿಸಿದನು.





ಅಲ್ಲಿ ಸೈನಿಕರು ಅಡಗಿರುವ ಸಂಗತಿ ಸ್ವಲ್ಪವೂ ಗೊತ್ತಾಗದಂತೆ ಬಹು ಎಚ್ಚರದಿಂದ ಅಡಗಿದ್ದರು. ನಿಜಕ್ಕೂ ಆ ಸುರಂಗ ಮಾರ್ಗದ ಮೂಲಕವೇ ಭೂಪತಿಯೂ ವಿಜಯವರ್ಮನೂ ನರಸಿಂಹನ ರಾಜ್ಯಕ್ಕೆ ಹೋಗಿ ಬಿಟ್ಟಿದ್ದರು. ಅಲ್ಲಿಗೆ ಹೋದಮೇಲೆ ಭೂಪತಿ ನರಸಿಂಹರಾಜನೊಂದಿಗೆ ವಿಜಯವರ್ಮನನ್ನು ಕುರಿತು, ಇವನು ಅಂತಃಪುರದ ಬಂಡಾಯದಲ್ಲಿದ್ದರೆ ಲಾಭವಿಲ್ಲವೆಂದೂ, ಸುರಂಗ ಮಾರ್ಗ ತಿಳಿಯುವುದಷ್ಟೇ ಇವನಿಂದಾಗುವ ಉಪಯೋಗವೆಂದೂ ಹೇಳಿ, ವಿಜಯವರ್ಮನನ್ನು ಅಲ್ಲಿಯ ಕಾರಾಗೃಹದೊಳಗೆ ಬಂಧಿಸುವಂತೆ ಮಾಡಿದನು.

ಅದಾದ ಕೂಡಲೇ ಭೂಪತಿ ನರಸಿಂಹರಾಜನನ್ನೂ, ಮಿಂಚಿನಷ್ಟು ಚತುರರಾದ ಐವತ್ತು ಮಂದಿ ಸೈನಿಕರನ್ನೂ ಕರೆದುಕೊಂಡು ಬಂದು ರಹಸ್ಯ ಸುರಂಗದೊಳಗೆ ಪ್ರವೇಶಿಸಿದನು. ಈ ಗುಂಪಿನಲ್ಲಿ ವಿಜಯವರ್ಮ ನಿಲ್ಲವೆಂಬ ಸಮಾಚಾರ ಕೂಡಲೇ ರವಿವರ್ಮ ರಾಜನಿಗೆ ಹೋಯಿತು. ಎಲ್ಲರೂ ಸುರಂಗದೊಳಗೆ ಹೊಕ್ಕ ಕೂಡಲೇ ಅದರ ಎರಡು ಕಡೆಯ ದ್ವಾರಗಳೂ ಬಂಧಿಸಲ್ಪಟ್ಟವು. ದ್ರೋಹಿಗಳೆಲ್ಲ ಒಳಗೆ ಸಿಕ್ಕಿಕೊಂಡರು.

ಆ ಕೂಡಲೇ ರವಿವರ್ಮ ರಾಜನು ತನ್ನ ಸೇನೆಯನ್ನು ಸಾಗಿಸಿಕೊಂಡು ಹೋಗಿ ನರಸಿಂಹನ ರಾಜ್ಯವನ್ನು ಬಹು ಸುಲಭವಾಗಿ ವಶಪಡಿಸಿಕೊಂಡು, ವಿಜಯವರ್ಮನನ್ನು ಸೆರೆಮನೆಯಿಂದ ಬಿಡಿಸಿ ಆಗಿಂದಾಗಲೇ ಅವನನ್ನು ನರಸಿಂಹನ ರಾಜ್ಯಕ್ಕೆ ರಾಜನನ್ನಾಗಿ ಅಭಿಷೇಕ ಮಾಡಿದನು.

ಸುರಂಗದೊಳಗೆ ಅನ್ನ ನೀರಿಲ್ಲದೆ ಶಲ್ಯಪ್ರಾಯರಾಗಿ ಹೋದ ವೀರಾಧಿ ವೀರರೆಲ್ಲರೂ ರವಿವರ್ಮನಿಗೆ ಸುಲಭವಾಗಿ ಸಿಕ್ಕಿಕೊಂಡರು. ಮುಖ್ಯ ವಿದ್ರೋಹಿಗಳಾದ ಭೂಪತಿಯೂ, ನರಸಿಂಹನೂ ಮರಣ ಶಿಕ್ಷೆ ಅನುಭವಿಸಿದರು. ಉಳಿದ ಸೈನಿಕರು ಕ್ಷಮಿಸಲ್ಪಟ್ಟು

ಸ್ವಲ್ಪ ಹೊತ್ತಿನೊಳಗೆ ರಾಜನನ್ನು ಕೊಲೆಮಾಡಲಿದ್ದ ಮನುಷ್ಯನು ಸಿಕ್ಕಿಬಿದ್ದನು. ಅವನು ತನ್ನನ್ನು ಭೂಪತಿಯೂ ವಿಜಯವರ್ಮನೂ ನಿಯೋಜಿಸಿರುವುದಾಗಿ ಹೇಳಿದನು.

ಆ ದಿನ ರಾತ್ರಿ ಭೂಪತಿ ವಿಜಯವರ್ಮನೊಂದಿಗೆ ಇದ್ದನೆಂಬ ಸಂಗತಿಯೂ ಹೊರಬಿದ್ದಿತು. ಆದರೆ ಅವರಿಬ್ಬರೂ ರಾಜಭವನದೊಳಗಾಗಲೀ, ಭವನದ ಆವರಣದೊಳಗಾಗಲೀ ಕಾಣಲಿಲ್ಲ. ಅವರು ರಾಜಭವನದೊಳಗಿನ ರಹಸ್ಯ ಮಾರ್ಗದ ಮೂಲಕ ಪಾರಾಗಿರುವರೆಂಬುದಕ್ಕೆ ಆಧಾರಗಳು ದೊರಕಿದುವು. ಅದು ಅಂತಃಪುರದಿಂದ ಹೊರಡುವ ಒಂದು ಸುರಂಗ ಮಾರ್ಗವಾಗಿತ್ತು. ಆ ಸುರಂಗದ ಎರಡನೇ ಕೊನೆ ಅರಣ್ಯ ಪ್ರಾಂತದ ಒಂದು ದೇವಾಲಯದಲ್ಲಿದ್ದಿತು. ಆದುದರಿಂದ ಈಗ ಆಲಯದ ಸುತ್ತಲೂ ಇದ್ದ ಮರಗಳ ಹಿಂದೆ ಕೆಲವು ಮಂದಿ ಸೈನಿಕರನ್ನು ಕಾವಲಿಗೆ ಇರಿಸಲಾಯಿತು.

ತಮ್ಮ ರಾಜ್ಯಕ್ಕೆ ಹೋಗಿ, ವಿಜಯವರ್ಮನ ಅಂಗ ರಕ್ಷಕ ದಳದಲ್ಲಿ ಸೇರಿಸಲ್ಪಟ್ಟರು.

ಅನಂತರ ವೀರವರ್ಮನ ಕುಮಾರಿಗೆ ಸ್ವಯಂ ವರದ ಮೂಲಕ ವಿವಾಹವು ನಡೆಯಿತು. ಆಗ ರವಿವರ್ಮನು ಅಳಿಯನಿಗೆ ಅರ್ಧ ರಾಜ್ಯವನ್ನು ಕೊಟ್ಟು ಉಳಿದ ಅರ್ಧರಾಜ್ಯವನ್ನು ವಿಜಯವರ್ಮನ ರಾಜ್ಯದೊಂದಿಗೆ ಕೂಡಿಸಿ ಒಂದೇ ರಾಜ್ಯವನ್ನಾಗಿ ಮಾಡಿದನು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜಾ, ದ್ರೋಹಿಗಳಲ್ಲಿ ಒಬ್ಬನಾದ ಭೂಪತಿಗೆ ಮರಣದಂಡನೆಯನ್ನು ವಿಧಿಸಿದ ರವಿವರ್ಮನು, ಆ ದ್ರೋಹದಲ್ಲಿ ಸೇರಿದ ಎರಡನೆಯವನಾದ ವಿಜಯವರ್ಮನಿಗೆ ಯಾವ ದಂಡನೆಯನ್ನೂ ಕೊಡದೆ, ಅವನು ದೊಡ್ಡ ರಾಜನಾಗುವಂತೆ ಮಾಡಿದನಲ್ಲಾ? ಅದೇಕೆ? ಇದರಲ್ಲಿ ಯಾವ ರಾಜನೀತಿ ಇದೆ? ಅಥವಾ ಅದು ಕೇವಲ ಪುತ್ರವಾತ್ಸಲ್ಯವೆನ್ನೋಣವೆ? ಈ ಸಂದೇಹಕ್ಕೆ ತಕ್ಕ ಸಮಾಧಾನ ತಿಳಿದಿದ್ದೂ ಹೇಳದೆಹೋದರೆ ನಿನ್ನ ತಲೆ ಚೂರುಚೂರಾಗಿ ಹಾರುತ್ತದೆ!" ಎಂದು ಹೇಳಿ ಸುಮ್ಮನಾಯಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು: "ಭೂಪತಿ ತಲೆ ಹಾಕಿದ ತಂತ್ರವನ್ನು ಭಗ್ನಪಡಿಸಲು ಪೂರ್ತಿ ಸಹಾಯ ಮಾಡಿದವನು ವಿಜಯವರ್ಮನೇ ಎನ್ನಲು ಯಾವ ಸಂದೇಹವೂ ಇಲ್ಲ. ರಾಜನಿಗೆ ಪಾರಿವಾಳದ ಮೂಲಕ ಚೀಟು ಕಳುಹಿಸಿದವನು ಅವನೇ. ರಾಜನನ್ನು ಕೊಲ್ಲುವುದು ತಂತ್ರದ ಮುಖ್ಯಭಾಗವಾಗಿದ್ದರೆ, ಆ ಕೆಲಸವನ್ನು ರಾಜನ ಮಗನಂತೆಯೇ ಬೆಳೆದ ವಿಜಯ ವರ್ಮನು ಬಹು ಸುಲಭದಲ್ಲಿ ಮಾಡುತ್ತಿದ್ದನು. ಅದಕ್ಕಾಗಿ ಇನ್ನೊಬ್ಬನನ್ನು ಉಪಯೋಗಿಸಬೇಕಾಗಿದ್ದಿಲ್ಲ. ಎಲ್ಲವನ್ನೂ ಮೀರಿಸಿದ್ದೆಂದರೆ ಅವನು ತಪ್ಪಿಸಿಕೊಂಡು ಹೋಗಲು ಸುರಂಗ ಮಾರ್ಗವನ್ನು ಉಪಯೋಗಿಸಿಕೊಂಡ ಬುದ್ಧಿವಂತಿಕೆ! ಆ ಮಾರ್ಗವು ಭೂಪತಿಗೆ ತಿಳಿಯಬೇಕೆಂತಲೂ, ಅವನು ಅದನ್ನು ಶತ್ರು ನರಸಿಂಹನಿಗೆ ಹೇಳಬೇಕೆಂತಲೂ ವಿಜಯ ವರ್ಮನೇ ಹಾಗೆ ಮಾಡಿದನು. ಇಲ್ಲದಿದ್ದರೆ ವಿಜಯ ವರ್ಮನು ನರಸಿಂಹರಾಜನ ಬಳಿಗೆ ಸಾಧಾರಣ ಮಾರ್ಗದಿಂದಲೇ ಹೋಗಬಹುದಿತ್ತು. ರಹಸ್ಯ ಮಾರ್ಗ ಅವನಿಗೇಕೆ ಬೇಕಾಗಿತ್ತು? ಇದನ್ನೆಲ್ಲಾ ರವಿ ವರ್ಮನು ಸುಲಭದಲ್ಲೇ ತಿಳಿದುಕೊಂಡನು. ಇನ್ನೂ ಏನಾದರೂ ಸಂದೇಹ ಉಳಿದಿದ್ದರೆ ವಿಜಯವರ್ಮನನ್ನು ನರಸಿಂಹನು ಕಾರಾಗೃಹದಲ್ಲಿ ಬಂಧಿಸಿದುದನ್ನು ನೋಡಿದರೆ ಆ ಸಂದೇಹವೂ ಹಾರಿಹೋಗುತ್ತದೆ."

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಮರದ ಕೊಂಬೆಯಲ್ಲಿ ನೇತಾಡತೊಡಗಿತು.



# ಮೂಲವೇ ಹೋಯಿತು!

ಒಂದು ಊರಿನಲ್ಲಿ ವೀರಣ್ಣನೆಂಬವನು ಊರವರಿಗೆಲ್ಲ ಸಹಾಯಮಾಡುತ್ತ, ಎಲ್ಲರ ಮೆಚ್ಚುಗೆಯನ್ನೂ ಪಡೆದು, ಊರವರ ಸಹಾಯದಿಂದ ಮದುವೆ ಕೂಡಾ ಮಾಡಿಕೊಂಡು ಗೃಹಸ್ಥನಾದನು. ಹಾಗೆಯೇ ಸ್ವಲ್ಪ ಹಣವನ್ನೂ ಸೇರಿಸಿಟ್ಟುಕೊಂಡನು.

ಹೀಗಿರುವಾಗ ಒಂದು ದಿನ ವೀರಣ್ಣನ ಮನೆಗೆ ಕಳ್ಳರು ಬಿದ್ದು, ಕಸಪೊರಕೆ ಕೂಡಾ ಉಳಿಸದೆ ಸರ್ವಸ್ವವನ್ನೂ ಒರೆಸಿ ದೋಚಿಕೊಂಡು ಹೋದರು. ಆ ಪರಿಸ್ಥಿತಿಯಲ್ಲಿ ಊರಿನವರು ಅವನ ಕೈಬಿಡದೆ ತಲಾ ಸ್ವಲ್ಪ ಚಂದಾ ಸೇರಿಸಿ ವೀರಣ್ಣನು ಮತ್ತೆ ಗೃಹಸ್ಥನಾಗುವಂತೆ ಮಾಡಿದರು.

ಅದೇ ಊರಿನಲ್ಲಿ ಚೆನ್ನಪ್ಪನೆಂಬವನು ಬುದ್ಧಿ ತಿಳಿದಂದಿನಿಂದಲೂ ಅಕ್ರಮ ಮಾರ್ಗದಿಂದಲೇ ಸಂಪಾದಿಸಿ ದೊಡ್ಡ ಧನಿಕನಾಗಿದ್ದವನಿಗೆ ವೀರಣ್ಣನ ಪರಿಸ್ಥಿತಿ ನೋಡಿ ಹೊಸ ದುರ್ಬುದ್ಧಿ ಹುಟ್ಟಿತು. ಒಂದು ದಿನ ರಾತ್ರಿ ಅವನು ತನ್ನ ಮನೆಯ ಬೆಲೆ ಬಾಳುವ ಸೊತ್ತುಗಳನ್ನೆಲ್ಲಾ ಊರ ಹೊರಗೆ ಪಾಳುಬಿದ್ದ ಕೆರೆಯ ಹತ್ತಿರ ಹುಗಿದಿಟ್ಟು, ಬೆಳಗಾಗುವಷ್ಟರಲ್ಲಿ ಅವನೂ ಅವನ ಹೆಂಡತಿಯೂ ಕಳ್ಳರು ಮನೆಪೂರಾ ದೋಚಿಕೊಂಡು ಹೋದರಲ್ಲಾ ಎಂದು ದಾರುಣವಾಗಿ ಶೋಕಿಸತೊಡಗಿದರು. ಈ ಕಳ್ಳತನದ ಸಮಾಚಾರ ಊರಿಗೆಲ್ಲಾ ತಿಳಿದು ಹೋಯಿತು. ಆದರೆ ಅದಕ್ಕಾಗಿ ಯಾರೂ ದುಃಖಿಸಲಿಲ್ಲ. ಚೆನ್ನಪ್ಪ ಯಾರಿಗೆ ಏನು ಸಹಾಯ ಮಾಡಿದ್ದಾನೆಂದು ಸಹಾನುಭೂತಿ ತೋರಿಸಿಯಾರು? ಬಾಯಿ ಮಾತಿನಿಂದ ಸಹಾನುಭೂತಿ ತೋರಿಸಿದರಾದರೂ ಚಿಕ್ಕಾಸು ಕೂಡಾ ಅವನಿಗೆ ಕೊಡಲಿಲ್ಲ.

ಆದುದರಿಂದ ಚೆನ್ನಪ್ಪ ದಂಪತಿಗಳು ಅಮಾವಾಸ್ಯೆಯದಿನ ರಾತ್ರಿ ತಾವು ಹುಗಿದಿಟ್ಟ ಸೊತ್ತುಗಳನ್ನು ಅಗೆದುಕೊಂಡು ಇನ್ನೊಂದು ಊರಿಗೆ ಹೋಗಿ ಬಿಡಬೇಕೆಂದು ನೋಡಿದರು. ಇಷ್ಟರಲ್ಲಿ ಆಕಸ್ಮಿಕವಾಗಿ ಗ್ರಾಮಾಧಿಕಾರಿಗೆ, ಸ್ವಲ್ಪ ಕಾಲದಿಂದ ನೆನೆಗುದಿಗೆ ಬಿದ್ದಿದ್ದ ಗುಡಿಯ ಕೆಲಸ ಪ್ರಾರಂಭಿಸಬೇಕೆಂದೂ, ಕೆರೆಯ ಹತ್ತಿರವೇ ಗುಡಿಯನ್ನೆಬ್ಬಿಸಬೇಕೆಂದೂ ನಿರ್ಣಯವಾಯಿತು. ಅಂತೆಯೇ ಗುಡಿಯ ತಳಪಾಯ ಅಗೆಯುತ್ತಿದ್ದಾಗ, ಚೆನ್ನಪ್ಪನ ಧನವಷ್ಟೂ ಅವರಿಗೆ ಸಿಕ್ಕಿತು. ಆ ದೇವರೇ ತನ್ನ ಗುಡಿಯ ಖರ್ಚನ್ನು ಒದಗಿಸಿದನೆಂದುಕೊಂಡರು. ಚೆನ್ನಪ್ಪನ ಸತ್ತ ನಟನೆ ಅವನಿಗೆ ಸಾವೇ ಆಯಿತು.





# ವರವಿಕ್ರಯ

ಒಂದು ಊರಿನಲ್ಲಿ ವೆಂಕಟರತ್ನನೆಂಬ ವ್ಯಾಪಾರಸ್ಥನಿದ್ದನು. ಅವನಿಗೆ ಹೆಣ್ಣುಮಕ್ಕಳೇ ಇರಲಿಲ್ಲ. ಬದಲಾಗಿ ನಾಲ್ಕು ಮಂದಿ ಗಂಡುಮಕ್ಕಳೇ ಇದ್ದರು. ಆದುದರಿಂದ ಎಲ್ಲರೂ ಅವನನ್ನು ಅದೃಷ್ಟವಂತನೆಂದು ಹೇಳುತ್ತಿದ್ದರು. ವೆಂಕಟರತ್ನನಿಗೂ ತಾನು ಅದೃಷ್ಟವಂತನೆನಿಸಿತ್ತು.

ಹೀಗಿರಲು ಒಬ್ಬ ಸಾಹುಕಾರನು ವೆಂಕಟರತ್ನನ ಹಿರಿಯ ಮಗನಿಗೆ ತನ್ನ ಮಗಳನ್ನು ಕೊಡುವೆನೆಂದು ಹೇಳುತ್ತ, "ವರದಕ್ಷಿಣೆ ಎಷ್ಟು ಕೇಳಿದರೂ ಕೊಡುತ್ತೇನೆ. ಆದರೆ ನನ್ನದೊಂದು ಷರತ್ತು ಏನೆಂದರೆ, ನಿಮ್ಮ ಮಗನನ್ನು ನನ್ನ ಮನೆಯಳಿಯನನ್ನಾಗಿ ಬಿಡಬೇಕು" ಎಂದನು.

ಹಣ ಬರುವುದೆಂದರೆ ಯಾವುದಕ್ಕೂ ಸಿದ್ಧನಾಗಿದ್ದ ವೆಂಕಟರತ್ನನು, ಇಪ್ಪತ್ತೈದು ಸಾವಿರ ರೂಪಾಯಿ ವರದಕ್ಷಿಣೆ ಪಡೆದುಕೊಂಡು, ಮಗನಿಗೆ ಮದುವೆ ಮಾಡಿ, ಸಂಸಾರ ನಡೆಸಲು ಅವನ ಅತ್ತೇ ಮನೆಗೇ ಕಳುಹಿಸಿಬಿಟ್ಟನು.

ಎರಡನೇ ಮಗನಿಗೆ, ಇಪ್ಪತ್ತು ಸಾವಿರರೂಪಾಯಿ ವರದಕ್ಷಿಣೆ ಪಡೆದು, ಅವನಿಗೆ ಇಷ್ಟವಿಲ್ಲದ ಒಂದು ಹುಡುಗಿಯೊಂದಿಗೆ ಮದುವೆ ಮಾಡಿಸಿದನು. ಮಗನ ಮನಸ್ಸು ಎಷ್ಟು ನೊಂದರೂ ಹಣಪಡೆದ ತಂದೆಗೆ ಬಹಳ ಸಂತೋಷವಾಯಿತು. ಇಷ್ಟವಿಲ್ಲದ ಹೆಂಡತಿಯೊಂದಿಗೆ ಇರಲಾಗದೆ ಎರಡನೆಯವನು ಮತ್ತಾವಳನ್ನೋ ಪಳಗಿ ಅಲ್ಲೇ ಇದ್ದುಬಿಟ್ಟನು.

ಮೂರನೇ ಮಗನಿಗೆ ಹಣವಂತರ ಮನೆಯ ಹುಡುಗಿ ಸಿಕ್ಕಿತು. ವರದಕ್ಷಿಣೆಯಾಗಿ ಇಪ್ಪತ್ತು ಸಾವಿರವೂ ಸುಲಭವಾಗಿ ಬಂತು. ಆದರೆ ಮೂರನೇಯವನ ಹೆಂಡತಿ ಗಂಡನನ್ನು ಕೈಯೊಳಗೆ ಹಾಕಿಕೊಂಡು, ಅವನಿಂದ ಪ್ರತ್ಯೇಕ ಬಿಡಾರ ಹೂಡಿಸಿಕೊಂಡು ಬಿಟ್ಟಳು.

ಹೀಗೆ ತನ್ನ ಮಕ್ಕಳು ಒಬ್ಬೊಬ್ಬರೇ ತನ್ನೊಂದಿಗೆ ಬೆರೆತುಕೊಳ್ಳದೇ ಹೋದುದನ್ನು ಕುರಿತು ವೆಂಕಟರತ್ನನಿಗೆ ಚಿಂತೆಯೇನೂ ಆಗಲಿಲ್ಲ. ತಾನು ಆಶಿಸಿದುದಕ್ಕಿಂತಲೂ ಹೆಚ್ಚಿಗೇ ವರದಕ್ಷಿಣೆ ಬಂದಿತೆಂಬ ಸಂತೋಷವು, ಚಿಂತೆಯನ್ನು ಮುಚ್ಚಿಹಾಕಿತ್ತು.

ಆದರೆ ನಾಲ್ಕನೆಯವನು ಹಿರಿಯರು ಮೂವರಂತೆ ತಂದೆಗೆ ವಿಧೇಯನಾಗುವುದಕ್ಕೆ ಬದಲಾಗಿ, ಇದಿರು ತಿರುಗಿ, ವರದಕ್ಷಿಣೆ ತೆಗೆದುಕೊಳ್ಳುವ ಪಕ್ಷದಲ್ಲಿ ತಾನು

ಕೆ. ವಿಶ್ವನಾಥಶರ್ಮ

ಮದುವೆಯೇ ಮಾಡಿಕೊಳ್ಳಲಾರೆನೆಂದು ಖಂಡಿತ ವಾಗಿ ಹೇಳಿಬಿಟ್ಟನು. ಹಣದ ಮುಖ್ಯತ್ವವನ್ನು ಕುರಿತು ತಂದೆ ಎಷ್ಟೇ ಅರೆದು ಹೇಳಿದರೂ ಅವನು ಕೇಳಲಿಲ್ಲ. "ವರದಕ್ಷಿಣೆ ಎಂಬ ಮಾತುಬಿಟ್ಟು, ಬೇರೆ ಲಾಂಛನಗಳ ಹೆಸರಿನಲ್ಲಾದರೂ ತೆಗೆದುಕೊಳ್ಳೋಣ" ಎಂದು ವೆಂಕಟರತ್ನನು ಹೇಳಿದನು. ಆ ರೀತಿಯಲ್ಲಾದರೂ ಬರುವಂಥಾದ್ದನ್ನು ಬರಮಾಡಿಕೊಳ್ಳದೆ ಬಿಡಬಾರದೆಂದು.

"ಯಾವುದೇ ಲಾಂಛನದ ಹೆಸರಿನಲ್ಲಿಯೂ, ಹೆಣ್ಣಿನ ಕಡೆಯಿಂದ ಯಾವ ಕಾಣಿಕೆಯನ್ನೂ ತೆಗೆದುಕೊಳ್ಳದಿದ್ದರೇನೇ ನನಗೆ ಮದುವೆ. ಇಲ್ಲದಿದ್ದರೆ ಇಲ್ಲ!" ಎಂದು ಹೇಳಿ ವೆಂಕಟರತ್ನನ ನಾಲ್ಕನೇ ಮಗನು, ತನಗೆ ಹಿಡಿಸಿದ ಹುಡುಗಿಯನ್ನು ತಂದು, ತಂದೆಯ ಮುಂದೆಯೇ ಹೂಮಾಲೆಗಳನ್ನು ಹಾಕಿಸಿ ಮದುವೆ ಮಾಡಿಕೊಂಡನು. ಈ ಧಿಕ್ಕಾರವನ್ನು ಸಹಿಸಲಾಗದ ವೆಂಕಟರತ್ನನು ಅವಿಧೇಯನಾದ ತನ್ನ ನಾಲ್ಕನೇ ಮಗನನ್ನು ಮನೆಯಿಂದ ಹೊರಗೆ ಹಾಕಿಬಿಟ್ಟನು.

ಕಾಲವು ತಿಂಗಳುಗಳಾಗಿ ವರ್ಷಗಳಾಗಿ ಸಾಗುತ್ತಿರಲು ವೆಂಕಟರತ್ನನು ಮುದುಕನಾದನು. ಅವನ ಹೆಂಡತಿ ಎಂದೋ ತೀರಿಹೋದಳು. ಮಕ್ಕಳನ್ನು ಅವನೇ ದೂರಪಡಿಸಿಕೊಂಡಿದ್ದನು. ಈಗ ಶಕ್ತಿಕುಂದಿದ ಕಾಲದಲ್ಲಿ ಒಬ್ಬಂಟಿಗನಾಗಿ ಚಿಂತೆಹಿಡಿದು, ವಾತ, ನೋವು, ಉಬ್ಬಸ ಮೊದಲಾದ ರೋಗಗಳಿಂದ ಹಾಸಿಗೆ ಹಿಡಿದನು. ತನಗೆ ಚಾಕರಿಮಾಡಲು ಹಣ ಕೊಟ್ಟು ಯಾರನ್ನಾದರೂ ಇಟ್ಟುಕೊಳ್ಳೋಣವೆಂದರೆ. ಹಾಗೆ ಬಂದವರು ತನ್ನನ್ನು ಕುತ್ತಿಗೆ ಒತ್ತಿ ಕೊಂದು ಇರುವ ಧನವನ್ನೆಲ್ಲಾ ಅಪಹರಿಸುವರೇನೋ ಎಂಬ ಭಯ! ತಾನು ದಿಕ್ಕಿಲ್ಲದವನಾಗಿ ಸಾಯುವ ಹಾಗಾದೆನೆಂದು ದೊಡ್ಡ ಚಿಂತೆಗೆ ಬಿದ್ದನು.

ತಂದೆ ಹಾಸಿಗೆ ಹಿಡಿದ ಸಮಾಚಾರ ತಿಳಿದು ನಾಲ್ಕನೇ ಮಗನು ಹೆಂಡತಿಯೊಂದಿಗೆ ಬಂದುದನ್ನು ನೋಡಿ, ವೆಂಕಟರತ್ನನ ಕಣ್ಣುಗಳಲ್ಲಿ ನೀರು ತುಂಬಿತು. ಮಗನು ತಂದೆಗೆ ಸಮಾಧಾನ ಹೇಳಿದನು. ಚಿಕ್ಕಸೊಸೆ ತಾಯಿಯ ಹಾಗೆ ವೆಂಕಟರತ್ನನಿಗೆ ಸೇವೆಗಳನ್ನು ಮಾಡಿದಳು. ವೆಂಕಟರತ್ನನ ಹೋಗುವ ಜೀವ ಮತ್ತೆ ಚೇತರಿಸಿಕೊಂಡಿತು. ಎದ್ದು ನಡೆದಾಡುವಂತಾದನು. ಅವನು ತನ್ನ ಉಳಿದ ಮಕ್ಕಳನ್ನು ಕುರಿತು ವಿಚಾರಿಸಲು, "ಅವರಾರೂ ಬರಲಾರರು ಅಪ್ಪಾ. ನೀವು ಅವರನ್ನು ಬೆಲೆಕಟ್ಟಿ ಮಾರಿದ್ದೀರಿ. ಎರಡನೇ ಅಣ್ಣ ನರಕವಾಸದಲ್ಲಿದ್ದಾನೆ." ಎಂದನು.

ವೆಂಕಟರತ್ನನು ಸಣ್ಣ ಮಗುವಿನ ಹಾಗೆ ಅತ್ತನು. ಇನ್ನು ಮಗಂದಿರನ್ನು ಕೊಂಡುಕೊಳ್ಳಲು ಸಾಧ್ಯವಿಲ್ಲ. ವೃದ್ಧಾಪ್ಯದಶೆಯಲ್ಲಿ ಬೇಕಾದ ಪ್ರೇಮವು ವಿಕ್ರಯಿಸಲ್ಪಡದ ಮಗನಿಂದಲೇ ದೊರೆಯಿತು!





# ಹೆಚ್ಚಿನವರು

ಒಂದು ಊರಿನಲ್ಲಿ ಶ್ರವಣಾನಂದನೆಂಬ ಒಬ್ಬ ಧನವಂತನಿದ್ದನು. ಅವನಿಗೆ ಹಿರಿಯರು ಸಂಪಾದಿಸಿಟ್ಟಿದ್ದ ಆಸ್ತಿ ಬೇಕಾದಷ್ಟಿದ್ದಿತು. ಅವನು ಅದನ್ನು ಅನುಭವಿಸುತ್ತ, ಒಳ್ಳೊಳ್ಳೆಯ ಗ್ರಂಥಗಳನ್ನೋದಿಕೊಂಡು ಕಾಲಯಾಪನೆ ಮಾಡುತ್ತ ಊರೊಳಗೇ ಸುಖವಾಗಿ ಬದುಕಿಕೊಂಡಿದ್ದನು. ಹೆಚ್ಚಿಗೆ ಸಂಪಾದಿಸಬೇಕೆಂಬ ಪ್ರಯತ್ನ ಅವನಿಗಿರಲಿಲ್ಲ.

ಒಂದುದಿನ ಅವನ ಮನೆಗೆ ರಾಜಧಾನಿಯಲ್ಲಿರುವ ಮೂವರು ಬಂಧುಗಳು ಬಂದರು. ಅವರಲ್ಲಿ ಒಬ್ಬನು ವ್ಯಾಪಾರ ವೃತ್ತಿಯವನು. ಇನ್ನೊಬ್ಬನು ಸಂಗೀತ ವಿದ್ವಾಂಸ. ಮೂರನೆಯವನು ರಾಜನ ಅರಮನೆಯಲ್ಲಿ ಉದ್ಯೋಗಧಲ್ಲಿರುವವನು, ಶ್ರವಣಾನಂದನು ಅಪರೂಪವಾಗಿ ಒಟ್ಟಿಗೆ ಬಂದ ಆ ದೂರದ ಬಂಧುಗಳನ್ನು ಆದರಿಸಿ ಆತಿಥ್ಯವಿತ್ತು ಅವರವರ ವೃತ್ತಿಗಳ ವಿಷಯದಲ್ಲಿ ಮಾತಾಡಲು ತೊಡಗಿದನು. ಶ್ರವಣಾನಂದನ ಮಾತುಗಳಲ್ಲಿ ಅವನಿಗೆ ತುಂಬಾ ಲೋಕಾನುಭವವಿರುವುದು ಸ್ಪಷ್ಟವಾಗುತ್ತಿತ್ತು. ಒಮ್ಮೆ ಮೂವರೂ ಶ್ರವಣಾನಂದನೊಂದಿಗೆ, "ಶ್ರವಣಾನಂದರೆ, ನಿಮಗಿರುವ ಪರಿಜ್ಞಾನವನ್ನು ನೋಡುವಾಗ, ನಿಮ್ಮಿಂದ ಒಂದು ವಿಷಯ ತಿಳಿಯಬೇಕೆಂದು ಕಾಣುತದೆ. ನಾವು ಮೂವರೂ ಬೇರೆಬೇರೆ ವೃತ್ತಿ ಹಿಡಿದು ಬೇರೆಬೇರೆ ರೀತಿಗಳಲ್ಲಿದ್ದೇವೆ. ನಾವು ಮೂವರಲ್ಲಿ ಯಾರು ಹೆಚ್ಚಿನವರೆಂದು ಹೇಳಬಲ್ಲಿರಾ ?" ಎಂದು ಕೇಳಿದರು.

"ಹೆಚ್ಚಿನತನಕ್ಕೆ ಅವರು ಇವರು ಎಂಬುದೇ ನಿಲ್ಲ. ಬದುಕಿದಷ್ಟು ದಿವಸವೂ ಸಂತೋಷವಾಗಿರಲು ಯಾರಿಂದ ಸಾಧ್ಯವೋ ಅವರೆಲ್ಲಾ ಹೆಚ್ಚಿನವರೇ. ಮಾನವರ ಜೀವನಕ್ಕೆ ಸಂತೋಷವೇ ಲಕ್ಷ್ಯವಲ್ಲವೆ ?" ಎಂದ ಶ್ರವಣಾನಂದ.

"ಹಾಗಂದರೆ ಹೇಗೆ ? ಎಲ್ಲರಿಗೂ ವ್ಯಾಪಾರ ಮಾಡಬೇಕೆಂದಿರುತ್ತದೆ. ಎಲ್ಲರೂ ದೊಡ್ಡ ವ್ಯಾಪಾರಿಗಳಾಗಲು ಸಾಧ್ಯವೇ ?" ಎಂದು ವ್ಯಾಪಾರದವನು ಕೇಳಿದನು. ಅದರಂತೆ ಸಂಗೀತದವನೂ, ರಾಜೋದ್ಯೋಗಿಯೂ ತಮ್ಮ ತಮ್ಮ ಪ್ರತ್ಯೇಕತೆಯನ್ನು ಹೇಳಿಕೊಂಡು, "ನಾವೆಲ್ಲಾ ನಮ್ಮ ನಮ್ಮ ವೃತ್ತಿಗಳಲ್ಲಿ ಸಂತೋಷವಾಗೇ ಇದ್ದೇವೆ. ಹೆಚ್ಚಿನ ಸಂತೋಷ ಯಾರದೆಂಬುದೇ ಪ್ರಶ್ನೆ" ಎಂದರು. ಶ್ರವಣಾನಂದನು ನಕ್ಕು "ಹಾಗೆ ಕೇಳುವಿರಾದರೆ

ನಿಮ್ಮಲ್ಲಿ ಯಾವ ಹೆಚ್ಚಿನದೂ ಇಲ್ಲ. ನಾನು ನೀವು ಮೂವರನ್ನೂ ಮೀರಿಸಬಲ್ಲೆ" ಎಂದನು.

ಬಂಧುಗಳಿಗೆ ಇದೊಂದು ಸವಾಲಾಗಿ ತೋರಿತು. "ಹಾಗೆ ನಿಮ್ಮ ಮಾತು ರುಜುಪಡಿಸಿದರೆ ನಿಮಗೆ ನಾವು ಒಂದೊಂದು ಸಾವಿರ ವರಹ ಕೊಡುತ್ತೇವೆ" ಎಂದರು. ಶ್ರವಣಾನಂದನು ಈ ಪಂಥಕ್ಕೆ ಒಪ್ಪಿ ಅವರೊಂದಿಗೇ ಹೊರಟುಬಿಟ್ಟನು. ಮೊದಲು ವ್ಯಾಪಾರದವನ ಮನೆಯಲ್ಲೇ ಮೊಕ್ಕಾಂ ಹೂಡಿದನು.

ಆ ವ್ಯಾಪಾರಸ್ಥನಿಗೆ ಅನೇಕ ಅಂಗಡಿಗಳಿದ್ದುವು. ಅವುಗಳಲ್ಲಿ ಒಂದು ತರಕಾರೀ ಅಂಗಡಿ. ಶ್ರವಣಾನಂದನು ಆ ತರಕಾರಿ ಅಂಗಡಿಯಿಂದ ಒಂದು ಬುಟ್ಟಿ ಬದನೇಕಾಯಿಗಳನ್ನು ತೆಗೆದುಕೊಂಡು ಬೇರೊಂದು ಜಾಗದಲ್ಲಿ ಕುಳಿತನು. ಕೇಳಿದವರಿಗೆ ಬದನೇಕಾಯಿಯ ಬೆಲೆಯನ್ನು ಎಲ್ಲರಿಗಿಂತ ಹೆಚ್ಚೇ ಹೇಳುತಿದ್ದನು.



"ಬೇರೆಯವರಿಗಿಂತ ಹೆಚ್ಚು ಬೆಲೆ ಹೇಳುವೆ ಯೇಕೆ ?" ಎಂದು ಕೇಳಿದವರಿಗೆ ಶ್ರವಣಾನಂದನು, "ವಸ್ತುಗಳ ನಾಣ್ಯತೆಗೆ ತಕ್ಕ ಹಾಗೆ ಬೆಲೆ ಇರುತ್ತದೆ. ಬೇರೆಯವರು ಮಾರುವಂಥ ಬದನೇಕಾಯಿಯೇ ಆದರೆ ನಾನೇಕೆ ಹೆಚ್ಚು ಬೆಲೆ ಹೇಳುತ್ತೇನೆ? ನನ್ನ ಬದನೇಕಾಯಿ ಎಲ್ಲರೂ ಕೊಳ್ಳುವಂಥಾದ್ದಲ್ಲ ಬಿಡೀ ! ಸಾವುಕಾರ ಧನಗುಪ್ತರು ಯಾವಾಗಲೂ ನನ್ನ ಹತ್ತಿರವೇ ಕೊಂಡುಕೊಳ್ಳುತ್ತಾರೆ" ಎನ್ನುತ್ತಿದ್ದನು.

ಅದು ಧಾಕರೇ ವ್ಯಾಪಾರಕ್ಕೆ ಬರುವಂತಹ ಬಜಾರು. ಅಲ್ಪ ಸ್ವಲ್ಪ ಧನವಂತರಾದವರಿಗೆ ಅವನ ಮಾತು ಕೇಳಿ, ಅವನು ಹೇಳಿದ ಬೆಲೆಯನ್ನು ಕೊಟ್ಟು ಕೊಂಡುಕೊಳ್ಳುವುದೇ ತಮ್ಮ ತಾಖತ್ತಿಗೆ ನಿದರ್ಶನ ವೆನಿಸಿತು. ಬೇಗನೇ ಅವನ ಬದನೇಕಾಯಿಗಳೆಲ್ಲಾ ವಿಕ್ರೀತವಾಗಿ ಒಳ್ಳೆಯ ಲಾಭ ಬಂದಿತು.

ಮಾರನೇ ದಿನ ಶ್ರವಣಾನಂದನು ಸಾಮಾನ್ಯರ ಬಜಾರಿಗೆ ಹೋದನು. ಅಲ್ಲಿ ಅವನು ತನ್ನ ತರಕಾರಿಗಳ ಬೆಲೆಯನ್ನು ಸ್ವಲ್ಪ ಮಾತ್ರ ಲಾಭವಿಟ್ಟು ಕೊಂಡು ಬೇರೆಯವರಿಗಿಂತ ಅಗ್ಗಕ್ಕೇ ಮಾರಿದನು. ಹೆಚ್ಚು ವ್ಯಾಪಾರ ನಡೆದುದರಿಂದ ಲಾಭವೂ ಹೆಚ್ಚೇ ಬಂದಿತು. "ನಿಜಕ್ಕೂ ನಿಮ್ಮ ಬುದ್ಧಿವಂತಿಕೆಗೆ ಸಾವಿರ ಕೊಡಲೇಬೇಕು !" ಎಂದು ಅವನ ಬಂಧುವಾದ ವ್ಯಾಪಾರಸ್ಥನು ಶ್ರವಣಾನಂದನಿಗೆ ಸಾವಿರ ವರಹಗಳನ್ನು ಕೊಟ್ಟುಬಿಟ್ಟನು.

ಅಲ್ಲಿಂದ ಶ್ರವಣಾನಂದನು ಸಂಗೀತದ ಬಂಧುವಿನ ಮನೆಗೆ ಹೋದನು. ಅಲ್ಲಿ ದಿನಾ ಆ ಗಾಯಕನ ಹತ್ತಿರ ಸಂಗೀತ ಅಭ್ಯಾಸ ಮಾಡುತ್ತ, ದಿನಾ ಸಾಯಂಕಾಲ ಎಲ್ಲಿಗೋ ಹೋಗಿ ಬರುತ್ತಿದ್ದನು.

ಒಂದುದಿನ ಅವನು ಒಂದು ಜಿಂಕೆಯನ್ನು ತೆಗೆದುಕೊಂಡು ಬಂದು, "ನಮ್ಮಿಬ್ಬರೊಳಗೆ ಸಂಗೀತದ ಸ್ಪರ್ಧೆ ಪ್ರಾರಂಭಿಸಿದರೆ ಯಾರು ಗೆದ್ದವರೆಂಬುದನ್ನು ಈ ಜಿಂಕೆಯಿಂದ ತಿಳಿಯುತ್ತದೆ" ಎಂದನು ಸಂಗೀತ ವಿದ್ವಾಂಸನೊಂದಿಗೆ. ಇಬ್ಬರೊಳಗೆ ಸಂಗೀತದ ಸ್ಪರ್ಧೆ ನಡೆಯುವುದೆಂದು ಸುತ್ತುಮುತ್ತಿನ

ವರಿಗೆಲ್ಲ ಗೊತ್ತಾಯಿತು. ಅವರೆಲ್ಲಾ ನಿರ್ದಿಷ್ಟ ಸಮಯಕ್ಕೆ ಬಂದು ಸೇರಿದರು. ಮೊದಲು ಸಂಗೀತ ವಿದ್ವಾಂಸನು ಅದ್ಭುತವಾಗಿ ಹಾಡಿ ಎಲ್ಲರ ಮೆಚ್ಚುಗೆಯನ್ನೂ ಪಡೆದನು.

ಆಮೇಲೆ ಶ್ರವಣಾನಂದನು ಒಂದು ವಿರಹಗೀತೆಯನ್ನು ಹಾಡಿದನು. ತನ್ನ ಪ್ರಿಯಳಾದ ರಾಣಿಯನ್ನು ನೆನೆಯುತ್ತಾ ಅವಳ ಪ್ರಿಯನು ಹಾಡುವ ಗೀತವದು. ಪ್ರತಿಯೊಂದು ಪದದಲ್ಲಿಯೂ ರಾಣೀ ರಾಣೀ ಎಂದು ವಿಲಪಿಸುವಂತಿತ್ತು ಹಾಡು. ಅವನ ಹಾಡು ತೀರಾ ಕೆಳಮಟ್ಟವೆನ್ನುವಂತಿಲ್ಲದಿದ್ದರೂ, ಸಂಗೀತ ವಿದ್ವಾಂಸನ ಹಾಡಿನ ಇದಿರು ನಿಲ್ಲುವಂತಿರಲಿಲ್ಲ. ಆದರೆ ಅವನು ಆ ಹಾಡನ್ನು ಹಾಡಲು ತೊಡಗುತ್ತಲೇ, ದೂರದಲ್ಲಿದ್ದ ಜಿಂಕೆ ಅವನ ಮುಂದೆ ಬಂದು ನಿಂತು ಹಾಡು ಮುಗಿಯುವ ವರೆಗೂ ಕೇಳುತ್ತಿದ್ದು ಆಮೇಲೆ ಆಚೆಗೆ ಹೋಯಿತು.

ಅದನ್ನು ನೋಡಿ ಸುತ್ತಲಿದ್ದವರೂ, ಸಂಗೀತ ವಿದ್ವಾಂಸನೂ ಬೆರಗಾಗಿ ಹೋದರು. ಎಲ್ಲರೂ ಶ್ರವಣಾನಂದನನ್ನು ಮೆಚ್ಚಿದರು. ಹಾಡಿನಿಂದ ಪ್ರಾಣಿಗಳನ್ನು ಮೆಚ್ಚಿಸುವುದೆಂದರೆ ಸಾಧಾರಣ ವಿಷಯವಲ್ಲವಷ್ಟೇ ? ಸಂಗೀತ ವಿದ್ವಾಂಸನು ಶ್ರವಣಾನಂದನಿಗೆ ಸಾವಿರ ವರಹಗಳನ್ನು ಕೊಡುತ್ತ, "ಮೃಗವನ್ನು ಕೂಡಾ ನಿಮ್ಮ ಹಾಡಿನಿಂದ ಹೇಗೆ ಆಕರ್ಷಿಸಿದಿರಿ ?" ಎಂದು ಕೇಳಿದನು.

"ಇದರಲ್ಲಿ ಅಂತಹ ವಿಶೇಷವೇನಿಲ್ಲ. ಅದನ್ನು ಮೊದಲೇ ನಾನು ತಯಾರಿಸಿಟ್ಟಿದ್ದೆ. ಅದರ ಹೆಸರು ರಾಣಿ. ತನ್ನ ಹೆಸರನ್ನು ಕೇಳಿ ಅದು ನನ್ನ ಬಳಿಗೆ ಬಂದಿದೆ. ಅಷ್ಟೇ !" ಎಂದ ಶ್ರವಣಾನಂದ.

ಅಲ್ಲಿಂದ ಅವನು ರಾಜನ ಹತ್ತಿರ ಉದ್ಯೋಗ ಮಾಡುವವನ ಬಳಿಗೆ ಹೋಗಿ, "ನಾನು ನಿಮಗೆ ರಾಜನಿಂದ ಬಹುಮಾನ ಬರುವ ಹಾಗೆ



ಮಾಡುತ್ತೇನೆ" ಎಂದನು. ಆ ಮಾತು ಕೇಳಿ ರಾಜೋದ್ಯೋಗಿ, "ನನಗೆ ಬಹುಮಾನ ಬರುವ ಹಾಗೆ ಮಾಡಿದರೆ ನಿಮ್ಮ ಹೆಚ್ಚಳ ಹೇಗೆ ಗೊತ್ತಾಗುತ್ತೆ ?" ಎಂದನು. ಅದಕ್ಕೇನೂ ಹೇಳದೆ ಶ್ರವಣಾನಂದನು, ಒಂದು ರತ್ನವನ್ನು ತೆಗೆದುಕೊಂಡು ಮಂತ್ರಿಯ ಬಳಿಗೆ ಹೋಗಿ, ಅದನ್ನು ಕಾಣಿಕೆಯಾಗಿ ಅವನಿಗೆ ಕೊಟ್ಟು ನಮಸ್ಕರಿಸಿದನು.

ಮಂತ್ರಿ ಬಹಳ ಸಂತೋಷದಿಂದ, "ನನ್ನಿಂದ ನಿಮಗೇನಾದರೂ ಆಗಬೇಕಿತ್ತೆ ?" ಎಂದು ಕೇಳಿದನು.

"ತಾವು ನನಗೆ ಒಂದು ಗಳಿಗೆ ರಾಜದರ್ಶನ ಮಾಡಿಸಿದರೆ ಸಾಕು" ಎಂದನು ಶ್ರವಣಾನಂದ.

"ಆಗಲಿ. ನಾಳೆಯೇ ರಾಜನ ಸಭೆಗೆ ಬನ್ನಿರಿ" ಎಂದು ಅನುಜ್ಞೆ ಚೀಟುಕೊಟ್ಟನು ಮಂತ್ರಿ.

ಶ್ರವಣಾನಂದನು ಮಂತ್ರಿಯಿಂದ ಅಪ್ಪಣೆ ಪಡೆದು ಪ್ರಸಿದ್ಧನಾದೊಬ್ಬ ಕವಿಯ ಬಳಿಗೆ ಹೋಗಿ ಅವನಿಗೆ ಒಂದು ಚಿನ್ನದ ನಾಣ್ಯವನ್ನು ಕಾಣಿಕೆ

ಕೊಟ್ಟು, ಮಹಾರಾಜನನ್ನು ಹೊಗಳುವಂತಹ ಪದ್ಯವನ್ನು ಬರೆಯಿಸಿ ಪಡೆದುಕೊಂಡನು.

ಮರುದಿನ ಅವನು ರಾಜನ ಸಭೆಗೆ ಹೋಗಿ. ರಾಜನಿಗೆ ನಮಸ್ಕಾರಮಾಡಿ, ಆ ಪದ್ಯವನ್ನು ಹಾಡಿ ರಾಜನಿಗೆ ಶುಭ ಕೋರಿದನು.

ರಾಜನು ಆ ಹಾಡಿನ ಸ್ವಾರಸ್ಯಕ್ಕೆ ಸಂತೋಷ ಪಟ್ಟು, "ಈ ಪದ್ಯ ಯಾರು ರಚಿಸಿದರು ?" ಎಂದು ಕೇಳಿದನು.

ಅದಕ್ಕೆ ಶ್ರವಣಾನಂದನು, "ಬರೆದ ಕವಿ ಯಾರೋ ತಿಳಿಯದು ಮಹಾಪ್ರಭುಗಳೇ. ಆದರೆ ನನ್ನ ದೂರದ ಬಂಧುವೊಬ್ಬರು ನಿಮ್ಮ ಅರಮನೆಯ ಶಾಖೆಯಲ್ಲಿ ಉದ್ಯೋಗದಲ್ಲಿದ್ದಾರೆ. ಅವರ ಮನೆಗೆ ಬಂದಿದ್ದೆ. ಅವರು ದಿನಾ ಬೆಳಿಗ್ಗೆ ಎದ್ದು ಈ ಪದ್ಯವನ್ನು ಹಾಡಿದ ಹೊರತು ಯಾವ ಕೆಲಸವನ್ನೂ ಪ್ರಾರಂಭಿಸುವುದಿಲ್ಲ. ಈ ಪದ್ಯವನ್ನು ಕೇಳಿದ ಮೇಲೆಯೇ ನನಗೆ ತಮ್ಮ ದರ್ಶನ ಮಾಡಬೇಕೆಂಬ ಬಲವಾದ ಇಚ್ಛೆಯುಂಟಾಯಿತು. ಆ ಇಚ್ಛೆ ಈಗ ನೆರವೇರಿತು" ಎಂದನು.

ಶ್ರವಣಾನಂದನ ಬಂಧು ತನ್ನ ಅರಮನೆಯ ಉದ್ಯೋಗಸ್ಥನೆಂದು ತಿಳಿದು ರಾಜನು, ಅವನ ರಾಜಭಕ್ತಿಗೆ ಸಂತೋಷಿಸಿ, ಅವನ ಸಂಬಳವನ್ನು ಹೆಚ್ಚು ಮಾಡುವಂತೆ ಅಪ್ಪಣೆ ಕೊಟ್ಟನು.

ಅದರಿಂದ ಸುಪ್ರಸನ್ನನಾದ ಆ ಬಂಧು ಶ್ರವಣಾನಂದನಿಗೆ ಸಂತೋಷದಿಂದ ಸಾವಿರ ವರಹಗಳನ್ನು ಕೊಡುತ್ತ, "ನೀವು ನನಗೆ ಮಾಡಿದ ಉಪಕಾರಕ್ಕೆ ಈ ಬಹುಮಾನ ಸಾಲದು" ಎಂದನು.

ಆಮೇಲೆ ಮೂವರು ಬಂಧುಗಳೂ ಶ್ರವಣಾನಂದನೊಂದಿಗೆ ಕೂಡಿ, "ಅಲ್ಲಾ, ನಿಮ್ಮಲ್ಲಿ ಇಷ್ಟೊಂದು ಶಕ್ತಿ ಚಾತುರ್ಯಗಳಿರುವಾಗ, ಆ ಮೂಲೆಯ ಹಳ್ಳೀ ಮನೆಯಲ್ಲೇ ಬೂದಿಮುಚ್ಚಿದ ಕೆಂಡದ ಹಾಗೆ ಏಕೆ ಇರುವಿರಿ ? ರಾಜಧಾನಿಗೆ ಬಂದುಬಿಡಿ. ಇಲ್ಲಿದ್ದರೆ ನಿಮ್ಮ ಬುದ್ಧಿವಂತಿಕೆಗೆ ಒಳ್ಳೆಯ ಅವಕಾಶಗಳಿವೆ" ಎಂದರು.

ಶ್ರವಣಾನಂದನು ನಕ್ಕು, "ನಾನೀಗ ತೋರಿಸಿದ ವಿಜಯಗಳು ನೆಲೆಯಾದುವಲ್ಲ. ನಿಮ್ಮ ಹಾಗೆ ನಿಮ್ಮ ನಿಮ್ಮ ವೃತ್ತಿಗಳಲ್ಲಿ ನೆಲೆಯಾಗಿ ನಿಂತು ವಿಜಯಿಗಳಾಗುವುದೆಂದರೆ ಸುಲಭವೇನಲ್ಲ. ನಿಜವಾಗಿಯೂ ನಿಮಗಿಂತ ನಾನು ಹೆಚ್ಚಿನವನು ಅಲ್ಲವೇ ಅಲ್ಲ; ಆಗಲಿಕ್ಕೆ ಸಾಧ್ಯವೂ ಇಲ್ಲ. ಆದರೆ ನನಗೆ ಬೇಕಾದದ್ದು ವಿಜ್ಞಾನವನ್ನು ಸಂಪಾದಿಸುತ್ತ ಸಂತೋಷದಿಂದ ಜೀವನ ನಡೆಸುವುದೇ. ಅದು ನಮ್ಮ ಹಳ್ಳಿಯಲ್ಲೇ ನನಗೆ ಸಾಧ್ಯವಾಗಿದೆ" ಎಂದನು. ಅವನ ವಿನಯವನ್ನು ನೋಡಿ ಎಲ್ಲರಿಗೂ ಸಂತೋಷವಾಯಿತು.






## ೧

ಇಂದ್ರನು ಮಾಡಿದಂತಹ ಎಷ್ಟೋ ವಿಶಿಷ್ಟ ಕಾರ್ಯಗಳಲ್ಲಿ ವೃತ್ರನನ್ನು ಧ್ವಂಸಮಾಡಿದುದನ್ನು ವಿಶೇಷವಾಗಿ ಹೊಗಳಲಾಗಿದೆ. ಋಗ್ವೇದದಲ್ಲಿ ಎಪ್ಪತ್ತು ಸಾರಿ ಅವನನ್ನು "ವೃತ್ರಹನ"ನೆಂದು ಪ್ರಶಂಸಿಲ್ಪಟ್ಟಿದೆ. ನಿಜಕ್ಕೂ ವೃತ್ರಹನನದಲ್ಲಿ ಇಂದ್ರನೊಂದಿಗೆ ಅಗ್ನಿಗೂ, ಮರುತ್ತರೇ ಮೊದಲಾದವರಿಗೂ ಸ್ವಲ್ಪ ಪಾಲು ಇಲ್ಲದಿರಲಿಲ್ಲ. ಆದರೂ ಅದರ ಪ್ರಾಧ್ಯಾನತೆ ಇಂದ್ರನಿಗೇ ಸಲ್ಲುತ್ತದೆ.

ಇಂದ್ರನು ವೃತ್ರನನ್ನು ಮಾತ್ರವಲ್ಲದೆ ಊರಣ, ವಿಶ್ವರೂಪ, ಅರ್ಬುದ ಮೊದಲಾದ ಅನೇಕ ರಾಕ್ಷಸರನ್ನು ಕೂಡಾ ಕೊಂದಿದ್ದಾನೆ. ಹೀಗೆ ರಾಕ್ಷಸರನ್ನು ಕೊಂದಾಗಲೆಲ್ಲಾ ಇಂದ್ರನು ಸೋಮವನ್ನು ಹೊಟ್ಟೆ ತುಂಬಾ ಕುಡಿದು ತೃಪ್ತನಾಗುವನು.

ಇಂದ್ರನು ಪರ್ವತಗಳಿಗೂ ಮೈದಾನ ಪ್ರದೇಶಗಳಿಗೂ ಇರುವ ಕಂಪನವನ್ನು ನಿಲ್ಲಿಸಿದನೆಂದು ಹೇಳಲ್ಪಟ್ಟಿದೆ, ಆರ್ಯರು ತಮ್ಮ ಶತ್ರುಗಳೊಂದಿಗೆ ಹೋರಾಡ ಬೇಕಾಗಿ ಬಂದಾಗಲೆಲ್ಲಾ ಇಂದ್ರನನ್ನು ಸ್ಮರಿಸಲು, ಸಂಚಾರ ಶೀಲರಾದ ಆರ್ಯರಿಗೆ ಭೂಮಿ ಸುಗಮವಾದುದೊಂದು ಕಾರಣವೆನ್ನಬಹುದು. ಪುರಾಣ ಸಾಹಿತ್ಯದಲ್ಲಿ ಇಂದ್ರನು ಪರ್ವತಗಳ ರೆಕ್ಕೆಗಳನ್ನು ಖಂಡಿಸಿದನೆಂದು ಹೇಳಲ್ಪಟ್ಟಿವೆ. ಇಂದ್ರನು ಭೂಮ್ಯಾಕಾಶಗಳನ್ನು ಬೇರೆ ಬೇರೆ ಮಾಡಿ ನಿಲ್ಲಿಸಿದ್ದನು. ಇವೆರಡನ್ನು ಯಾವನೋ ಒಬ್ಬ ರಾಕ್ಷಸನು ಒಂದಾಗಿ ಮಾಡಿದಾಗ ಇಂದ್ರನು ಅವನನ್ನು ಕೊಂದು ಅವೆರಡನ್ನೂ ಬೇರೆಬೇರೆ ಮಾಡಿದನೆಂದೂ ಹೇಳಲಾಗಿದೆ.

'ಆರ್ಯರು ಇಂದ್ರನನ್ನು ಮಾತು ಮಾತಿಗೂ ಸ್ಮರಿಸುವುದು ಮಾತ್ರವಲ್ಲದೆ ಆವಾಹನೆ ಕೂಡಾ ಮಾಡುತ್ತಿದ್ದರು. ಇಂದ್ರನು "ಕರ್ರಗಿನ" ಜನರನ್ನು ಜಯಿಸಿದನೆಂದೂ ವಿವರಿಸಲಾಗಿದೆ. ಅಂದರೆ ಇಂದ್ರನು ಐವತ್ತು ಸಾವಿರಮಂದಿ ಕಪ್ಪು ಜನರನ್ನು ಓಡಿಸಿ, ಅವರ ಪಟ್ಟಣಗಳನ್ನೆಲ್ಲ ಧ್ವಂಸ ಮಾಡಿದನು. ದಸ್ಯುಗಳನ್ನು ಆರ್ಯರಿಗೆ ದಾಸರಾಗುವಂತೆ ಮಾಡಿ ಆರ್ಯರಿಗೆ ಭೂಮಿಯನ್ನು ಕೊಟ್ಟನು. ಸಪ್ತ ಸಿಂಧು ದೇಶದಲ್ಲಿ ದಸ್ಯುಗಳ ಆಯುಧಗಳನ್ನು ಆರ್ಯರ ಮೇಲೆ ಬೀಳದಂತೆ ಹಿಂದಿರುಗಿಸಿ ಆರ್ಯರನ್ನು



ಕಾಪಾಡಿದನು. ತನ್ನನ್ನು ನಂಬಿದವರ ಮೇಲೆ ಇಂದ್ರನಿಗಿರುವ ದಯವು ಅಪಾರ. ಅಂಥವರಿಗೆ ಯಾವಾಗಲೂ ಸಹಾಯಕಾರಿಯಾಗಿರುವನು. ತನ್ನನ್ನು ಆರಾಧಿಸುವವರಿಗೆ ಅವನು ಮಿತ್ರ, ಸೋದರ, ತಂದೆ ಎಲ್ಲವೂ!

ಇಂದ್ರನಿಗೆ ಕುಶಿಕ ವಂಶದ ಮೇಲೆ ತುಂಬಾ ಅಭಿಮಾನ. ಒಂದುಸಾರಿ ಇಂದ್ರನನ್ನೇ ಕೌಶಿಕ ಎಂದು ಸಂಬೋಧಿಸಲ್ಪಟ್ಟಿದೆ. ಸಮಸ್ತ ಸಂಪದಗಳಿಗೂ ಇಂದ್ರನೇ ಮೂಲ. ಅವನ ಯುದ್ಧಗಳನ್ನು "ಗವಿಷಿ" ಅಂದರೆ ಗೋವುಗಳ ಆಶೆ ಎನ್ನುತ್ತಿದ್ದರು. ಇಂದ್ರನು ಯಾವಾಗಲೂ ಹೆಚ್ಚಾಗಿ ಗೋವುಗಳನ್ನೇ ಭಕ್ತರಿಗೆ ನೀಡುವನು. ಒಂದೊಂದುಸಾರಿ ಭಕ್ತರಿಗೆ ಹೆಂಡದಿರನ್ನೂ ಮಕ್ಕಳನ್ನೂ ಸಹ ಕೊಡುತ್ತಾನೆ. ಋಗ್ವೇದದಲ್ಲಿ "ಮಘವ" ಅಂದರೆ ಧಾರಾಳವಾಗಿ ಕೊಡುವವನು ಇಂದ್ರನೇ ಎಂದಿದೆ. ಅವನೇ "ವಸುಪತಿ" ಅಂದರೆ ಸಂಪತ್ತುಗಳ ಒಡೆಯ.

ಇಂದ್ರನ ವೀರಕೃತ್ಯಗಳು ಅನೇಕ ಹೇಳಲ್ಪಟ್ಟಿವೆ. ಅವನು ಉಷೆಯ ಗಾಡಿಯನ್ನು ಒಡೆದು ಹಾಕಿದನು. ವಾಹನಗಳನ್ನು ನಾಶಮಾಡಿದನು. ಆದರಿಂದ ಉಷಾ ಹೆದರಿ ಓಡಿ ಹೋದಳು.

ಉಷೆಗೆ ಮಾತ್ರವಲ್ಲದೆ ಸೂರ್ಯನ ರಥಕ್ಕೂ, ಏತಶವೆಂಬ ಕುದುರೆಯಿಂದ ಎಳೆಯಲ್ಪಡುವ ರಥಕ್ಕೂ ಸ್ಪರ್ಧೆಯುಂಟಾದಾಗ, ಸೂರ್ಯನ ರಥವೇ ಮುಂದಕ್ಕೆ ಹೋಗುವುದನ್ನು ನೋಡಿ, ಇಂದ್ರನು ಅದರಲ್ಲಿ ತಲೆ ಹಾಕಿ, ಸೂರ್ಯನ ರಥದ ಒಂದು ಚಕ್ರವನ್ನು ಕಿತ್ತು ಒಡೆದು ಹಾಕಿದನು. ಆದುದರಿಂದಲೇ ಸೂರ್ಯನ ರಥಕ್ಕೆ ಒಂದೇ ಚಕ್ರವೆಂದು ಹೇಳುತ್ತಾರೆ.

ಒಂದು ಸಂದರ್ಭದಲ್ಲಿ ಪಣಿ ಎಂಬ ಜಾತಿಗೆ ಸೇರಿದ ಲೋಭಿಗಳು ಯಜ್ಞದಲ್ಲಿ ಬಲಿಕೊಡಲು ಗೋವುಗಳನ್ನು ಕೊಡಲಿಲ್ಲ. ಗೋವುಗಳನ್ನೆಲ್ಲ ಎಲ್ಲಿಯೋ ಗುಹೆಗಳಲ್ಲಿ ಅಡಗಿಸಿಟ್ಟುಬಿಟ್ಟರು. ಇಂದ್ರನು ಇದನ್ನು ತಿಳಿದು ಸರಮಾ ಎಂಬ ದೂತೆಯನ್ನು ಕಳುಹಿಸಿದನು. ಅವಳು ಪಣಿಗಳ ಹತ್ತಿರ ಹೋಗಿ ಇಂದ್ರನಿಗಾಗಿ ಗೋವುಗಳನ್ನು ಕೇಳಿದಾಗ ಅವರು ಅವಳಿಗೆ ಗೇಲಿ ಮಾಡಿ ನೆಗಾಡಿದರು. ಇದನ್ನು ಕೇಳಿ ಇಂದ್ರನು ಸ್ವತಃ ಬಂದು ಪಣಿಗಳನ್ನು ಜಯಿಸಿ ಗೋವುಗಳನ್ನು ತೆಗೆದುಕೊಂಡನು.

ಇಂದ್ರನು ದಾಸರನ್ನೂ ದಸ್ಯುಗಳನ್ನೂ ಜಯಿಸಿದಂತೆ ಅನೇಕಸಾರಿ ಹೇಳಲ್ಪಟ್ಟಿದೆ. ಇವರೆಲ್ಲಾ ಚಪ್ಪಟೆ ಮೂಗುಗಳಿರುವ ಕಪ್ಪಗಿನ ಮನುಷ್ಯರೇ. ಹೀಗೆ ಇಂದ್ರನು ಪ್ರತ್ಯೇಕ ವ್ಯಕ್ತಿಗಳಿಗೆ ಕೂಡಾ ಒಳ್ಳೆಯದು ಮಾಡಿದ್ದಾನೆ. ಹಾಗೆ ಇಂದ್ರನ ಅಭಿಮಾನಕ್ಕೆ ಪಾತ್ರರಾದವರಲ್ಲಿ ದಿವೋದಾಸನೂ ಒಬ್ಬನು. ಈ ದಿವೋದಾಸನ ಮಗನೇ ಸುಪ್ರಸಿದ್ಧನಾದ ರಾಜ ಸುದಾಸ. ಈ ದಿವೋದಾಸನ ಶತ್ರು ಶಂಬರನೆಂಬವನು ದಾಸ ಜಾತಿಯವನು. ಇಂದ್ರನು ದಿವೋದಾಸನಿಗಾಗಿ ಆ ಶಂಬರನನ್ನು ಕೊಂದನು.

ನಮುಚಿ ಎಂಬವನು ಒಬ್ಬ ರಾಕ್ಷಸ. ವೇದಸಾಹಿತ್ಯದಲ್ಲಿ ಇವನ ಪ್ರಸ್ತಾವನೆ ಅನೇಕ ಕಡೆಗಳಲ್ಲಿ ಬಂದಿವೆ. ಇಂದ್ರನು ಇವನ ತಲೆಯನ್ನು ತಿರುಗಿಸಿ ಕೊಂದನೆಂದೂ, ಇನ್ನೊಂದು ಕಡೆಯಲ್ಲಿ ನೀರಿನ ನೊರೆಗಳಿಂದ ಕೊಂದನೆಂದೂ ಹೇಳಲ್ಪಟ್ಟಿದೆ. ಇಂದ್ರನು ರಾಕ್ಷಸರನ್ನು ಸಮುದ್ರದ ನೊರೆಗಳಿಂದ ಕೊಲ್ಲುವ ಪದ್ಧತಿ ವೃತ್ರನನ್ನು ಕೊಲ್ಲುವಾಗಲೂ ನಡೆದಿದೆ.

ಒಂದುಸಾರಿ ಇಂದ್ರನು ನಮುಚಿಯ ಸಾನ್ನಿಧ್ಯದಲ್ಲಿ ವಿಪರೀತವಾಗಿ ಕುಡಿದು ರೋಗ ತಂದುಕೊಂಡು ನರಳುತ್ತಿದ್ದಾಗ, ಅಶ್ವಿನೀ ದೇವತೆಗಳೂ ಸರಸ್ವತಿಯೂ ಚಿಕಿತ್ಸೆಮಾಡಿ ವಾಸಿಮಾಡಿದರೆಂದು ಋಗ್ವೇದದ ಹತ್ತನೇ ಮಂಡಲದಲ್ಲಿದೆ.

ಯದು ಮತ್ತು ತುರ್ವಸುಗಳು ನದಿಯನ್ನು ದಾಟಲಾಗದೆ ಹೋದಾಗ ಇಂದ್ರನು ಅವರನ್ನು ನದಿ ದಾಟಿಸಿದನು. ಇದು ಸ್ವಲ್ಪ ಹೆಚ್ಚುಕಡಿಮೆ ವಾಸ್ತವ ಚರಿತ್ರೆಗೆ ಸಂಬಂಧಿಸಿದ ಅಂಶವಾಗಿ ಕಾಣುತ್ತದೆ. ಯಾದವರು ಶಾಖೋಪಶಾಖೆಗಳಾಗಿ ಹರಡಿ, ಭರತಖಂಡದ ಅನೇಕ ಪ್ರಾಂತಗಳಿಗೆ ವ್ಯಾಪಿಸಿ ಸ್ಥಿರಪಟ್ಟಿರುವರೆಂದು ಪುರಾತತ್ವ ಸಂಶೋಧನೆಗಳಿಂದ ತಿಳಿದು ಬರುತ್ತದೆ. ಆರ್ಯರ ಸಂಚಾರ ಜೀವನದಲ್ಲಿ ಇಂದ್ರನ ಸಂಬಂಧವಿರುವುದನ್ನು ನೋಡುವಾಗ ಈ ಸಂಘಟನೆ ದೃಢವೆನಿಸುತ್ತದೆ.

ಇಂದ್ರನೂ ಸುಶ್ರವಸುವೂ ಕೂಡಿ ಇಪ್ಪತ್ತುಮಂದಿ ಅರಣ್ಯ ಜಾತಿಯವರ ನಾಯಕರನ್ನೂ, ಅರುವತ್ತು ಸಾವಿರದ ತೊಂಬತ್ತೊಂಬತ್ತುಮಂದಿ ಅರಣ್ಯದ ಯೋಧರನ್ನೂ ನಾಶಮಾಡಿದಂತೆ ಕಥೆಯಿದೆ. ಹಾಗೆಯೇ ಸುದಾಸನ ಯುದ್ಧಗಳೆಲ್ಲವೂ ಚಾರಿತ್ರಿಕವಾದುದಾಗಿಯೇ ಕಾಣುತ್ತವೆ. ದಶರಾಜ್ಞ ಯುದ್ಧವೆಂಬುದು ಸುದಾಸನು ಹತ್ತುಮಂದಿ ರಾಜರೊಂದಿಗೆ ಯುದ್ಧ ಮಾಡಿದುದು. ಇದರಲ್ಲಿ ಇಂದ್ರನು ಸುದಾಸನಿಗೇ ಸಹಾಯಮಾಡಿದನು. ಹಾಗೆ ಸಹಾಯ ಮಾಡುವಂತೆ ವಸಿಷ್ಠ, ತೃತ್ಸು ಮೊದಲಾದ ಋಷಿಗಳು ಇಂದ್ರನನ್ನು ಕೇಳಿಕೊಂಡರು. ಕಡೆಗೆ ಇಂದ್ರನು ಸುದಾಸನ ಶತ್ರುಗಳನ್ನೆಲ್ಲ ಪರುಷ್ಣೀ ನದಿಯಲ್ಲಿ



ಬಿಸುಟುಬಿಟ್ಟನು. ವೇದಕಾಲದ ಇಂದ್ರನು ನೈತಿಕ ವರ್ತನೆಯಲ್ಲಿಯೂ, ಔನ್ನತ್ಯದಲ್ಲಿಯೂ ವರುಣ ನೊಂದಿಗೆ ಸರಿಬಾರನು. ಆದರೂ ವರುಣನಲ್ಲಿರುವು ವೆಂದು ವರ್ಣಿಸಲ್ಪಟ್ಟ ಗುಣಗಳೆಲ್ಲ ಅನೇಕವಾಗಿ ಇಂದ್ರನಲ್ಲಿಯೂ ಇರುವುವೆಂದು ಹೇಳಲ್ಪಟ್ಟದೆ.

ಗೌತಮನ ಪತ್ನಿಯಾದ ಅಹಲ್ಯೆಗೂ, ಇಂದ್ರನಿಗೂ ಇರುವ ಸಂಬಂಧದ ಕಥೆ ವೇದಕಾಲದ್ದೇ ಹೊರತು ಪುರಾಣಕಾಲದ ಕಲ್ಪನೆಯೆನ್ನುವಂತಿಲ್ಲ.

ವರುಣನು ಇಂದ್ರನಿಗಿಂತಲೂ ಪೂರ್ವದವನೆಂದು ಕೆಲವು ಪಂಡಿತರು ಅಭಿಪ್ರಾಯಪಡುತ್ತಾರೆ. ಋಗ್ವೇದ ಕಾಲವು ಮುಂದುವರಿಯುತ್ತಾ ಬಂದಂತೆ, ವರಣನ ಪ್ರಸ್ತಾವನೆಯ ಭಾಗವು ತಗ್ಗುತ್ತಾ ಹೋಗಿ, ಇಂದ್ರನ ಪ್ರಶಂಸೆಯೇ ಮುಖ್ಯವಾಗಿ ಉಳಿಯಿತು.

ಪಾರಸೀಕರ ಮತ ಗ್ರಂಥವಾದ "ಅವೆಸ್ತಾ"ದಲ್ಲಿ ಇಂದ್ರನ ಪ್ರಸ್ತಾವನೆ ಇದೆಯೇ ಹೊರತು ಪ್ರಶಂಸೆ ಇಲ್ಲ. ಅವರ ಲೆಕ್ಕದಲ್ಲಿ ಇಂದ್ರನೊಬ್ಬ ರಾಕ್ಷಸ. ಹಾಗೆಯೇ "ದೇವ" ಶಬ್ದಕ್ಕೆ ಅವೆಸ್ತಾದಲ್ಲಿ ಗೌರವ ವೇನಿಲ್ಲ. ಆ ಗ್ರಂಥವು "ಅಸುರ" ಶಬ್ದವನ್ನು ಗೌರವಿಸುತ್ತದೆ. ಆ ವೇದಗಳಲ್ಲಿರುವ ಅನೇಕ ಮಾತು ಗಳು ಅವೆಸ್ತಾದಲ್ಲಿಯೂ ಇವೆ. ಆದರಿಂದ ವೇದ ಗಳಿಗೂ, ಅವೆಸ್ತಾಕ್ಕೂ ಒಂದೇ ಬಗೆಯ ಸಂಸ್ಕೃತಿ ಇದ್ದಿರಬಹುದು. ಒಂದು ಕಾಲದಲ್ಲಿ ವೇದಗಳಲ್ಲಿ "ಅಸುರ" ಶಬ್ದವು ಗೌರವವಾಚಕವಾಗಿದ್ದುದನ್ನು ಗಮನಿಸಿದರೆ ಇದು ನಿಜವೆನಿಸುತ್ತದೆ. ಆದರೆ ಒಂದು ದಶೆಯಲ್ಲಿ ಅವೆರಡರ ನಡುವೆ ವೈಷಮ್ಯ ಉಂಟಾಯಿತು. ಹತ್ತುಮಂದಿ ರಾಜರ "ದಶರಾಜ್ಞ" ಯುದ್ಧದಿಂದಾಗಿಯೇ ಈ ವೈಷಮ್ಯ ಬಂತೆಂದು ಕೆಲವರು ಹೇಳುತ್ತಾರೆ.

ಪುರಾಣ ಕಾಲದ ಇಂದ್ರನನ್ನು ವೇದಕಾಲದ ಇಂದ್ರ ನೊಂದಿಗೆ ಹೋಲಿಸುವಾಗ ದೊಡ್ಡ ಯೋಧನಾಗಿ ಕಾಣುವುದಿಲ್ಲ. ಯಜ್ಞಗಳ ಕಾಲ ಅಂತರಿಸಿ, ತಪಸ್ಸಿಗೆ ಪ್ರಾಮುಖ್ಯತೆ ಬಂದ ಮೇಲೆ, ಪ್ರತಿ ರಾಕ್ಷಸನೂ ತಪಸ್ಸು ಮಾಡಿ, ಬ್ರಹ್ಮನಿಂದಲೋ ಶಿವನಿಂದಲೋ ವರಗಳನ್ನು ಪಡೆದು ಇಂದ್ರನನ್ನು ಅವಲೀಲೆಯಾಗಿ ಜಯಿಸಿಬಿಟ್ಟರು.

ಆಗ ಇಂದ್ರನು ವಿಷ್ಣುಮೂರ್ತಿಯನ್ನು ಮಾತ್ರ ವಲ್ಲದೆ, ದಶರಥನಂತಹ ಮನುಷ್ಯರ ಸಹಾಯವನ್ನು ಕೂಡಾ ಪಡೆಯಬೇಕಾಗಿ ಬಂದಿದೆ! ಎಷ್ಟೇ ದೊಡ್ಡವ ನಾದರೂ, ಎಷ್ಟೇ ಬಲಶಾಲಿಯಾದರೂ ಸಮಯ ಬಂದಾಗ ಇನ್ನೊಬ್ಬರ ಸಹಾಯ ಬೇಕಾಗುವುದೆಂಬ ಎಚ್ಚರವನ್ನು ಇಂದ್ರನು ಕೊಡುತ್ತಾನೆ. ಹೀಗೆ ಅಮರ ರಾಜನಾದ ಇಂದ್ರನ ಕಥೆ ಬಗೆಬಗೆಯಾಗಿ, ಗಹನ ವಾಗಿ, ಗೂಢಾರ್ಥ ಬಿಂಬಿತವಾಗಿ, ಮನೋರಂಜಕ ವಾಗಿ ಅಮರವೆನಿಸಿದೆ.





## ROUTINE

| DAYS | 1st period | 2nd period | 3rd period | 4th period | 5th period | 6th period | 7th period |
|---|---|---|---|---|---|---|---|
| Monday | | | | | | | |
| Tuesday | | | | | | | |
| Wednesday | | | | | | | |
| Thursday | | | | | | | |
| Friday | | | | | | | |
| Saturday | | | | | | | |
| Sunday | | | | | | | |

**CHANDAMAMA** A monthly magazine for children where the old become younger and the young grow older.

## ಪ್ರತಿ ಪುಟವೂ ಭಾರತೀಯ ಸಂಸ್ಕೃತಿಯ ಪ್ರತಿಬಿಂಬ

ಮಹಾನ್ ಕಾವ್ಯಗಳಿಂದ ಆಯ್ದ ಕಥೆಗಳು, ಸ್ಫೂರ್ತಿದಾಯಕ ದಂತಕಥೆಗಳು, ಐತಿಹಾಸಿಕ ಸಚಿತ್ರ ಲೇಖನಗಳು. ಜತೆಗೆ ಸಮಕಾಲೀನ ಜೀವನ ಪರಿಚಯ ಮತ್ತು ಭಾರತವನ್ನು ಕುರಿತ ಉಪಯುಕ್ತ ಸಮೃದ್ಧ ವಿಚಾರಸಂಪತ್ತು.

ಭಾರತದ ಸಂಸ್ಕೃತಿಯು ದಂತಕಥೆ, ಇತಿಹಾಸ, ಧರ್ಮ ಮತ್ತು ಪುರಾಣದಲ್ಲಿ ಅಡಗಿದೆ. ಅತ್ಯಂತ ಸಮಕಾಲೀನ ಪ್ರಜ್ಞೆಯ ಭಾರತೀಯನೂ ಪ್ರಾಚೀನ ಪರಂಪರೆ, ಸಂಪ್ರದಾಯ ಮತ್ತು ನಂಬಿಕೆಗಳನ್ನು ಅಲಕ್ಷಿಸಲಾಗದು.

ಪ್ರತಿ ಭಾರತೀಯನ ಮನೆಯಲ್ಲೂ, ಅತ್ಯಂತ ಸರಳ ಮತ್ತು ಅತ್ಯಂತ ಗಹನವಾದ ಸೌಲಭ್ಯಗಳನ್ನು ಎಳೆವಯಸ್ಸಿನಲ್ಲೇ ಉಂಟು ಮಾಡಲು ಮಕ್ಕಳಿಗೆ ಪುರಾಣ ಪ್ರಸಿದ್ಧರ ಧೈರ್ಯ, ಸಾಹಸ, ಪ್ರಾಮಾಣಿಕತೆ ಮತ್ತು ನ್ಯಾಯ ನಿಷ್ಠೆಯ ಕಥೆಗಳನ್ನು ಹೇಳಲಾಗುತ್ತದೆ. ಆದರೆ ಹಲವಾರು ಪೀಳಿಗೆಗಳಿಂದ ಇಂಥ ಕಥೆಗಳು ಸಾಮಾನ್ಯವಾಗಿ ಬಾಯಿಂದ ಬಾಯಿಗೆ ಮಾತ್ರ ಹರಡುತ್ತಿವೆ. ಮಕ್ಕಳಿಗಾಗಿ ಅವುಗಳನ್ನು ಬರೆದಿಡುವ ಕೆಲಸ ನಡೆದಿರುವುದು ಅತ್ಯಲ್ಪ. ಈ ನಿರ್ದಿಷ್ಟ ಸಂಪರ್ಕದ ಕೊರತೆಯನ್ನು ಪರಿಹರಿಸುವುದಕ್ಕಾಗಿ 1947 ರಲ್ಲಿ ಚಂದಮಾಮ (ನಮ್ಮ ಜಾನಪದದಲ್ಲಿ ಸ್ನೇಹ, ಮಮತೆ ಮತ್ತು ಜನಪ್ರಿಯತೆಗೆ ಮತ್ತೊಂದು ಹೆಸರು) ಸೃಷ್ಟಿಯಾಯಿತು.

ಅಂದು ಮತ್ತು ಇಂದಿನ ನಡುವಣ ಅವಧಿಯಲ್ಲಿ ಭಾರತೀಯ ಮಕ್ಕಳ ಹೃನ್ಮನಗಳಲ್ಲಿ ಭಾರತೀಯ ಸಂಸ್ಕೃತಿಯ ಅರಿವುಂಟು ಮಾಡುವುದಕ್ಕೆ ಅತ್ಯಂತ ಹೆಚ್ಚು ಕಾಣಿಕೆ ಸಲ್ಲಿಸಿರುವ ಪ್ರಮುಖ ಪತ್ರಿಕೆಯಾಗಿದೆ ಚಂದಮಾಮ.

ಮನಸ್ಸನ್ನು ಸೆರೆಹಿಡಿಯುವ ಆಕರ್ಷಕ ಸಮೃದ್ಧ ಸಾಹಿತ್ಯದಿಂದ ಕೂಡಿದ ಚಂದಮಾಮ ಭಾರತೀಯರಲ್ಲದವರಿಗೂ ಒಳ್ಳೆಯ ಕಥೆಗಳನ್ನು ಹೇಳುವ ಪತ್ರಿಕೆಯಾಗಿದೆ. ಕೇವಲ ಅಂಕೆ ಅಂಶಗಳ ದೃಷ್ಟಿಯಿಂದ ಹೇಳುವುದಾದರೆ ಈವರೆಗೆ ಚಂದಮಾಮ 4310 ಕ್ಕೂ ಹೆಚ್ಚು ಕಥೆಗಳು, ಪದ್ಯ ರೂಪದ 133 ಕಥೆಗಳು ಮತ್ತು ಪುರಾಣ ಪುಣ್ಯಕಥೆ, ಮಹಾನ್ ಕೃತಿಗಳು, ಜಾನಪದ, ಜೀವನ ಚರಿತ್ರೆ ಮತ್ತು ಇತಿಹಾಸವನ್ನು ಆಧರಿಸಿದ 120 ಧಾರಾವಾಹಿಗಳನ್ನು ಪ್ರಕಟಿಸಿದೆಯೆಂಬುದು ಆಸಕ್ತಿ ಕೆರಳಿಸುವ ಅಂಶ.

ಇಂಗ್ಲಿಷ್ ಸೇರಿದಂತೆ ಈಗ ಹದಿಮೂರು ಭಾಷೆಗಳಲ್ಲಿ ಪ್ರಕಟವಾಗುತ್ತಿರುವ ಚಂದಮಾಮ ಈ ವರ್ಗಕ್ಕೆ ಸೇರಿದ ಪತ್ರಿಕೆಗಳಲ್ಲೆಲ್ಲ ಅತ್ಯಂತ ಜನಪ್ರಿಯ **ಚಂದಮಾಮ.**





## 12,000,000 ಮಕ್ಕಳೇ ಪ್ರತಿ ತಿಂಗಳೂ ಚಂದಮಾಮದ ಅಪಾರ ಜನಪ್ರಿಯತೆಗೆ ಸಾಕ್ಷಿ

ಭಾರತ ಮತ್ತು ದೂರಪ್ರಾಚ್ಯದ ಮನೆಮನೆ, ಶಾಲೆ ಮತ್ತು ಪುಸ್ತಕಾಲಯಗಳನ್ನು ತಲುಪುವ ಚಂದಮಾಮದ ಪ್ರಸಾರ 800,000 ಮುಟ್ಟುತ್ತಿದೆ.



# ವಿಚಾರಚಿತ್ರ

ಅನೇಕಾನೇಕ ವರ್ಷಗಳ ಹಿಂದೆ ಸಾಕೇತಪುರದ ರಾಜನಿಗೆ ನಾಲ್ಕು ಮಂದಿ ಕುಮಾರರ ತರುವಾಯ ಐದನೇ ಮಗನು ಹುಟ್ಟಿದನು. ಅದಕ್ಕಾಗಿ ರಾಜನು ಚಿಕ್ಕ ರಾಣಿಯನ್ನು ಒಂದು ವರ ಕೇಳು ವಂತೆ ಹೇಳಿದನು. ಅವಳು ತನ್ನ ಕುಮಾರನಿಗೇ ರಾಜ್ಯ ಸಿಗಬೇಕು ಎಂದಳು. ಈ ಸಂಗತಿ ತಿಳಿದು ದೊಡ್ಡವರು ನಾಲ್ವರೂ ಸಾಕೇತವನ್ನು ಬಿಟ್ಟು ಹೋಗಿಬಿಟ್ಟರು.

ಹಾಗೆ ಹೋದವರು ತಮ್ಮ ಪರಿವಾರದೊಂದಿಗೆ ಹಿಮಾಲಯ ಪರ್ವತದ ಬುಡವನ್ನು ಸೇರಿದರು. ಅವರು ಯಾವುದಾದರೊಂದು ನಗರವನ್ನು ಜಯಿಸಿ ಅದನ್ನು ಪಾಲಿಸಬಹುದೆಂದು ರಾಜನು ಅಂದುಕೊಂಡನು. ಆದರೆ ಒಬ್ಬ ಮುನಿ ಅವರಿಗೆ ಹೊಸ ನಗರ ನಿರ್ಮಿಸುವಂತೆ ಹೇಳಿದುದರಿಂದ, ರಾಜಕುಮಾರರು, ಆ ಮುನಿಕುಟೀರದ ಪ್ರಾಂತ ದಲ್ಲೇ ತಮ್ಮ ನಿವಾಸವನ್ನು ಕಲ್ಪಿಸಿಕೊಂಡರು.





ಕಪಿಲನೆಂಬ ಆ ಮುನಿಯಿಂದಾಗಿ ಆ ಜನಾ ವಾಸಕ್ಕೆ ಕಪಿಲವಸ್ತು ಎಂದು ಹೆಸರುಬಂತು. ಆ ಪ್ರಾಂತದಲ್ಲಿ ಶಾಕ (ತೇಗು) ವೃಕ್ಷಗಳು ಹೆಚ್ಚಾಗಿದ್ದುದರಿಂದ ಅಲ್ಲಿಯವರಿಗೆ ಶಾಕ್ಯರೆಂಬ ಹೆಸರುಬಂತು. ಅನೇಕ ಕಲಾಂತರಗಳಾದ ಮೇಲೆ ಶುದ್ಧೋದನನು ಆ ವಂಶದವರಿಗೆ ರಾಜನಾದನು. ಒಂದುದಿನ ರಾತ್ರಿ ಅವನ ರಾಣಿಯಾದ ಮಾಯಾ ದೇವಿ ತನ್ನ ಶರೀರದೊಳಗೆ ಬಿಳಿಯಾದ ಆನೆ ಯೊಂದು ಪ್ರವೇಶಿಸಿದಂತೆ ಸ್ವಪ್ನ ನೋಡಿದಳು.



ರಾಣಿಯ ಗರ್ಭದೊಳಗೆ ಒಬ್ಬ ಮಹಾತ್ಮನು ಪ್ರವೇಶಿಸಿದನೆಂದು ಶಾಸ್ತ್ರಜ್ಞರು ಆ ಸ್ವಪ್ನಕ್ಕೆ ಅರ್ಥ ಹೇಳಿದರು. ರಾಣಿ ತನ್ನ ತೌರು ಮನೆಗೆ ಹೊರಟಳು. ದಾರಿಯಲ್ಲಿ ಅವಳು ಲುಂಬಿನೀ ವನದಲ್ಲಿ ದಣಿವಾರಿಸಿ ಕೊಳ್ಳುತ್ತ, ಸಾಲವೃಕ್ಷದ ಕೊಂಬೆಯನ್ನು ಹಿಡಿದು ಕೊಂಡಿದ್ದಳು. ಆಗ ಅವಳಿಗೆ ಹೆರಿಗೆಯ ನೋವು ಶುರುವಾಯಿತು.

ರಾಣಿ ಲುಂಬಿನೀ ವನದಲ್ಲಿಯೇ ಮಗನನ್ನು ಹಡೆದಳು. ತಾಯಿ ಮಗಂದಿರು ಕಪಿಲ ವಸ್ತುವಿಗೇ ಹಿಂದಿರುಗಿದರು. ರಾಜನು ಪರಮಾನಂದದಿಂದ ಆನಂದೋತ್ಸವ ನಡೆಸುವಂತೆ ಆಜ್ಞೆ ಮಾಡಿದನು. ಆದರೆ ಆ ಉತ್ಸವಗಳ ನಡುವೆ ರಾಣಿ ತನ್ನ ಮಗನನ್ನು ಮಾತೃಹೀನನಾಗುವಂತೆ ಮಾಡಿ ತೀರಿ ಹೋದಳು.





ರಾಜಕುಮಾರನಿಗೆ ಸಿದ್ಧಾರ್ಥನೆಂದು ನಾಮಕರಣ ಮಾಡಿದರು. ಅಂದರೆ ಆಶಯಸಿದ್ಧಿ ಪಡೆದವನೆಂದು ಅರ್ಥ. ರಾಜಕುಮಾರನು ಒಂದು ದಿನ ಉದ್ಯಾನದಲ್ಲಿ ಕುಳಿತುಕೊಂಡಿದ್ದಾಗ, ಬಾಣ ದೇಟು ತಗಲಿದ ಪಕ್ಷಿಯೊಂದು ಅವನ ಮಡಿಲಿಗೆ ಬಿತ್ತು. ಅವನು ಬಾಣವನ್ನು ಕಿತ್ತು ಪಕ್ಷಿಯನ್ನು ಕಾಪಾಡಿದನು. ಅಷ್ಟರಲ್ಲಿ ಅವನ ಜ್ಞಾತಿಯಾದ ದೇವ ದತ್ತನು ಅಲ್ಲಿಗೆ ಬಂದನು.

"ಆ ಪಕ್ಷಿಯನ್ನು ಹೊಡೆದವನು ನಾನು. ಅದನ್ನು ನನಗೆ ಕೊಡು" ಎಂದನು ದೇವದತ್ತ. ಆದರೆ ಸಿದ್ಧಾರ್ಥನು ಪಕ್ಷಿಯನ್ನು ಕೊಡಲಿಲ್ಲ. ಇಬ್ಬರೂ ರಾಜನ ಸಭೆಗೆ ಹೋದರು. "ಯಾವ ಪ್ರಾಣಿಯಾದರೂ ಅದನ್ನು ಕೊಲ್ಲಲು ನೋಡಿದವನಿಗೆ ಸೇರುತ್ತದೆಯೆ? ಅದರ ಪ್ರಾಣವನ್ನು ಕಾಪಾಡಿದವನಿಗೆ ಸೇರುತ್ತದೆಯೆ?" ಎಂದು ಸಿದ್ಧಾರ್ಥನು ಕೇಳಿದನು. ಮಂತ್ರಿಗಳು ಅವನಿಗೆ ಅನುಕೂಲವಾಗಿ ಹೇಳಿದರು.





ಒಂದು ದಿನ ನೇಗಿಲು ಹಬ್ಬ ನಡೆಯಿತು. ಹೊಲಗಳನ್ನು ಉಳುವ ಆ ಉತ್ಸವ ನೋಡಲು ರಾಜಕುಮಾರನೂ ಹೋದನು. ಹೊಲದಲ್ಲಿ ಕೆಲವು ಮಂದಿ ರೈತರು ಒಂದು ಹಾವನ್ನು ಹೊಡೆದು ಕೊಲ್ಲುವುದನ್ನು ನೋಡಿದನು. ಈ ಪ್ರಪಂಚ ವ್ಯವಹಾರವು ಹಿಂಸೆಯೊಂದಿಗೆ ಮೇಳವಿಸಿರುವುದೆಂದು ತಿಳಿದು ಅವನಿಗೆ ವಿಚಾರವು ಹಿಡಿಯಿತು.

ಸಿದ್ಧಾರ್ಥನು ಯಾವಾಗಲೂ ಲೋಕದ ರೀತಿ ನೀತಿಗಳನ್ನು ಒಂದೇ ಸಮನೆ ಆಲೋಚಿಸತೊಡಗಿದನು. ಮಾನವನು ಯಾವಾಗಲೂ ಘರ್ಷಣೆಗೂ, ಹಿಂಸೆಗೂ ಬಲಿಯಾಗಲೇ ಬೇಕೇನು? ಮನುಷ್ಯನಿಗೆ ಜೀವನದಲ್ಲಿ ಸುಖ ಭೋಗಗಳು ಸಂತೃಪ್ತಿಯನ್ನು ಕೊಡಬಲ್ಲುವೇ? ಮಾನವ ಜೀವಿತಕ್ಕೆ ಬೇರೆ ಯಾವ ಲಕ್ಷ್ಯವೂ ಇಲ್ಲವೇ? ಇದೇ ಅವನ ಧ್ಯಾನ.





ಮನೆ ದಾಟದೆ ಒಳಗೇ ಇದ್ದರೆ ರಾಜಕುಮಾರನು ಚಕ್ರವರ್ತಿಯಾಗುವನೆಂದೂ, ಇಲ್ಲದಿದ್ದರೆ ಬುದ್ಧತ್ವ ಪಡೆಯುವನೆಂದೂ ಜ್ಯೋತಿಷ್ಕರು ಹೇಳಿದರು. ರಾಜನು ಕುಮಾರನಿಗಾಗಿ ಮೂರು ಮಂದಿರಗಳನ್ನು ನಿರ್ಮಿಸಿದನು. ಬೇಸಗೆಗೆ ಚಂದ್ರಶಿಲೆಗಳ ಮಂದಿರ, ಶೀತಕಾಲಕ್ಕೆ ದಾರು ಮಂದಿರ, ಮಳೆಗಾಲಕ್ಕೆ ವಿಶಾಲ ಮಂದಿರ ಹೀಗೆ ಅವನಿಗೆ ಸಕಲ ಸೌಖ್ಯಗಳೂ ಒದಗಿಸಲ್ಪಟ್ಟವು.

ಸುಪ್ರಬುದ್ಧನ ಮಗಳಾದ ಯಶೋಧರೆ ಅತ್ಯಂತ ಸುಂದರಿ. ಅವಳ ತಂದೆ ಅವಳಿಗೆ ಸ್ವಯಂವರವನ್ನು ಏರ್ಪಡಿಸಿದನು. ಶುದ್ಧೋದನನು ಆ ಸ್ವಯಂವರಕ್ಕೆ ಸಿದ್ಧಾರ್ಥನನ್ನು ಕಳುಹಿಸಿದನು. ಸ್ವಯಂವರದ ಸ್ಪರ್ಧೆಯಲ್ಲಿ ಅನೇಕ ರಾಜಕುಮಾರರು ಭಾಗವಹಿಸಿದರು. ಎಲ್ಲಾ ಸ್ಪರ್ಧೆಗಳಲ್ಲಿಯೂ ಸಿಧ್ಧಾರ್ಥನೇ ಗೆದ್ದನು.





ಯಶೋಧರೆ ವರಮಾಲೆಯನ್ನು ಸಿದ್ಧಾರ್ಥನ ಕೊರಳಿಗೆ ಹಾಕಿದಳು. ಅವರ ವಿವಾಹವು ನಡೆಯಿತು. ಸಿದ್ಧಾರ್ಥನು ತನ್ನ ವಧುವಿನೊಂದಿಗೆ ತನ್ನ ನಗರಕ್ಕೆ ಹಿಂದಿರುಗಿದನು. ಕಪಿಲವಸ್ತುವಿನಲ್ಲಿ ವೈಭವದಿಂದ ಆನಂದೋತ್ಸವಗಳು ನಡೆದುವು. ಇನ್ನು ತನ್ನ ಮಗನು ಮನೆ ಬಿಟ್ಟು ಹೋಗಲಾರನೆಂದು ಶುದ್ಧೋದನನ ಮನಸ್ಸಿಗೆ ನೆಮ್ಮದಿಯಾಯಿತು.



# ಬೇಡವಾದ ವಸ್ತುಗಳು

ಹಿಂದೆ ಮಣಿಪುರದಲ್ಲಿ ರಾಮ ಭಂಡಾರಿ ಎಂಬ ತೆಂಗಿನೆಣ್ಣೆಯ ವ್ಯಾಪಾರಸ್ಥನು ತುಂಬ ಪ್ರಸಿದ್ಧನಾಗಿದ್ದನು. ಅವನು ಸ್ವಂತದಲ್ಲಿ ಗಾಣವನ್ನೂ ಹಾಕಿಸುತ್ತಿದ್ದನು. ಎಣ್ಣೆ ತೆಗೆಯುವ ಒಣ ಕೊಬರಿಗಳಿಗಾಗಿ ಬೆಳೆದ ತೆಂಗಿನ ಕಾಯಿಗಳನ್ನು ಎಲ್ಲೆಲ್ಲಿಂದಲೋ ತರಿಸುತ್ತಿದ್ದನು. ತೆಂಗಿನ ಗೆರಟೆಗಳನ್ನು ಒಂದು ಬದಿಗೆ ಬಿಸುಡುತ್ತಿದ್ದನು. ಹಾಗೆ ಗೆರಟೆಗಳ ರಾಶಿಯೇ ಬೀಳುತ್ತಿತ್ತು. ದಾರಿಯಲ್ಲಿ ಹೋಗುವವರು ಗೆರಟೆಗಳನ್ನು ಎತ್ತಿಕೊಂಡು ಹೋದರೂ ಅವನೇನೂ ಹೇಳುತ್ತಿದ್ದಿಲ್ಲ.

ಒಂದುದಿನ ರಾಮಭಂಡಾರಿಯ ಪರಿಚಯದವನಾದ ಜನಾರ್ದನನೆಂಬ ಯುವಕನು ಅಲ್ಲಿಗೆ ಬಂದನು. ಮನೆಯ ಆವರಣದಲ್ಲಿ ಕಂಡ ಕಂಡವರು ಎತ್ತಿಕೊಂಡು ಹೋಗುವ ಹಾಗೆ ಬಿದ್ದಿದ್ದ ಗೆರಟೆಗಳ ರಾಶಿಯನ್ನು ರಾಮಭಂಡಾರಿಗೆ ತೋರಿಸುತ್ತ, "ಇವುಗಳನ್ನು ನೀವು ಏನು ಮಾಡುವಿರಿ ?" ಎಂದು ಕೇಳಿದನು.

"ಬಿಸಿನೀರು ಒಲೆಗೆ ಹಾಕುತ್ತೇವೆ. ಇವು ಬೇರೆ ಏತಕ್ಕಾದಾವು ?" ಎಂದನು ರಾಮಭಂಡಾರಿ.

"ದೊಡ್ಡ ದೊಡ್ಡ ಗೆರಟೆಗಳನ್ನು ಮಾರುವುದಾದರೆ ನಾನು ಕೊಂಡುಕೊಳ್ಳುತ್ತೇನೆ" ಎಂದನು ಜನಾರ್ದನ.

ರಾಮಭಂಡಾರಿಗೆ ಆಶ್ಚರ್ಯವಾಯಿತು. ಚಳಿಗಾಲದಲ್ಲಿ ಬಿಸಿನೀರು ಕಾಯಿಸಲಿಕ್ಕೆ ಮಾತ್ರ ಕೆಲಸಕ್ಕೆ ಬರುವಂಥಾದ್ದನ್ನು ಇವನು ತೆಗೆದುಕೊಂಡು ಹೋಗಿ ಏನು ಮಾಡುವನೋ ಎಂದುಕೊಂಡು ಸುಮ್ಮನೆ ಅವನ ಮುಖ ನೋಡಿದನು.

"ಯಾಕೆ ಏನೆಂಬುದೆಲ್ಲ ಈಗ ಹೇಳಲಾರೆ. ಕೊಡುವಿರಾ ಹೇಳಿ" ಎಂದನು ಜನಾರ್ದನ. "ಆಗಲಿ. ನೀನೇ ಒಂದು ಬೆಲೆಕಟ್ಟಿ ಕೊಂಡುಕೋ" ಎಂದನು ರಾಮಭಂಡಾರಿ.

ಜನಾರ್ದನನು ದೊಡ್ಡ ದೊಡ್ಡ ತೆಂಗಿನ ಗೆರಟೆಗಳನ್ನು ಆರಿಸಿ ಎರಡು ಗೋಣೀ ಚೀಲಗಳಲ್ಲಿ ತುಂಬಿಸಿ, ಅವುಗಳಿಗೆ ಒಂದು ಬೆಲೆಯನ್ನು ಕೊಟ್ಟು, ಸಾಗಿಸಿಕೊಂಡು ಹೋದನು.

ಆಮೇಲೆ ರಾಮಭಂಡಾರಿ ತೆಂಗಿನ ಕಾಯಿಗಳನ್ನು ಒಡೆಸುವಾಗ, ಪ್ರತಿ ಕಾಯಿಗೂ ಎರಡು ಚಿಪ್ಪುಗಳು ಬರುವಂತೆ ಸರಿಯಾಗಿ ಒಡೆಯಿಸುತ್ತಿದ್ದನು.

ಆರ್. ಸತ್ಯನಾರಾಯಣಮೂರ್ತಿ



ಜನಾರ್ದನನು ಹದಿನೈದು ದಿನಗಳಿಗೊಂದು ಸಾರಿ ಬಂದು ಗೆರಟೆಗಳನ್ನು ಕೊಂಡುಕೊಂಡು ಹೋಗುತ್ತಿದ್ದನು. ಹೀಗೆ ಒಂದು ವರ್ಷದವರೆಗೆ ನಡೆಯಿತು. ಆಮೇಲೆ ಜನಾರ್ದನನು ಬಂದು ಗೆರಟೆಕೊಂಡು ಕೊಂಡುಹೋಗುವುದನ್ನು ನಿಲ್ಲಿಸಿದನು.

ರಾಮಭಂಡಾರಿಯ ಮನೆಯಲ್ಲಿ ಮತ್ತೆ ಗೆರಟೆಗಳ ರಾಶಿ ಏರುತ್ತಿರಲು, ಒಂದು ತಿಂಗಳ ಮೇಲೆ ಮತ್ತೊಂದು ತಿಂಗಳು ಸಾಗುತ್ತಿರಲು, ಜನಾರ್ದನನು ಏಕೆ ಬರಲಿಲ್ಲವೋ ಎಂದು ದಾರೀ ನೋಡ ತೊಡಗಿದನು ರಾಮಭಂಡಾರಿ.

ಜನಾರ್ದನನು ಗೋಳೀಕಟ್ಟೆ ಎಂಬ ಊರಿನಲ್ಲಿರುವನೆಂದು ರಾಮಭಂಡಾರಿಗೆ ಗೊತ್ತಿತ್ತು. ಆ ಗ್ರಾಮವು ಮಣಿಪುರಕ್ಕೆ ಇಪ್ಪತ್ತು ಮೈಲು ದೂರದಲ್ಲಿದೆ. ಒಂದುದಿನ ಕೆಲಸದ ನಿಮಿತ್ತವಾಗಿ ನಗರಕ್ಕೆ ಹೋದ ರಾಮಭಂಡಾರಿ, ಜನಾರ್ದನನನ್ನೂ ನೋಡಲೇ ಬೇಕೆಂದುಕೊಂಡು, ಗೋಳೀಕಟ್ಟೆ ಗ್ರಾಮದ ಕಡೆಗೆ ಸಾಗಿದನು. ಆ ಗ್ರಾಮಕ್ಕೆ ತಲಪಿ, ಜನಾರ್ದನನ್ನು ಕುರಿತು ವಿಚಾರಿಸಿದಾಗ, ಅವನ ಮನೆಗೆ ಹೋಗುವ ದಾರಿ ಗೊತ್ತಾಯಿತು.

ರಾಮಭಂಡಾರಿ ಒಂದು ತೆಂಗಿನ ತೋಟವನ್ನೂ, ಎರಡು ಗದ್ದೆಗಳನ್ನೂ ದಾಟಿ ಮಾವಿನ ತೋಪಿನ ಮಧ್ಯದಲ್ಲಿರುವ ದೊಡ್ಡದೊಂದು ಮನೆಯನ್ನು ಮುಟ್ಟಿದನು. ಅದು ಐಶ್ವರ್ಯವಂತರ ಮನೆಯಾಗಿತ್ತು. ಜನಾರ್ದನನು ಆ ಮನೆಯಲ್ಲಿ ಕೆಲಸಗಾರನಾಗಿರಬೇಕೆಂದು ರಾಮಭಂಡಾರಿ ಭಾವಿಸಿ, ಆಳನ್ನು ನೋಡಿ, "ಇಲ್ಲಿ ಜನಾರ್ದನನೆಂಬಾತ ಇದ್ದಾನೇನು ?" ಎಂದು ಕೇಳಿದನು.

ಕೆಲಸದಾಳು ರಾಮಭಂಡಾರಿಯನ್ನು ಒಂದು ತರಹೆಯಾಗಿ ನೋಡಿ, ಒಳಗೆ ಹೋಗುವಂತೆ ದಾರಿ ತೋರಿಸಿದನು. ಆ ಮನೆ ಜಮೀನುದಾರರ ಭವನದ ಹಾಗೆ ಭವ್ಯವಾಗಿತ್ತು. ರಾಮಭಂಡಾರಿ ಮನೆಯೊಳಗೆ ಪ್ರವೇಶಿಸುವಾಗ ಮಾಳಿಗೆಯ ಬಿಡುಚಾವಡಿಯಲ್ಲಿ ಕೆಲವರೊಂದಿಗೆ ಮಾತಾಡಿಕೊಂಡು ಶ್ರೀಮಂತನೊಬ್ಬ ಕುಳಿತಿದ್ದ. ಅವನ ಮುಖ ಜನಾರ್ದನನ ಹಾಗಿದ್ದರೂ ಬೆಲೆಬಾಳುವ ಬಟ್ಟೆಗಳನ್ನು ಧರಿಸಿದವನಾದುದರಿಂದ ಬೇರೆ ಯಾರೋ ಇರಬೇಕೆಂದುಕೊಂಡನು.

ಅಷ್ಟರಲ್ಲಿ ರಾಮಭಂಡಾರಿಯನ್ನು ನೋಡಿ, ಆ ಶ್ರೀಮಂತನು ಎದ್ದು ಮಾಳಿಗೆಯಿಂದ ಕೆಳಗಿಳಿದು ಬಂದು, "ಬನ್ನಿ ಭಂಡಾರಿಯವರೇ, ಹೀಗೆ ಕೂಡಿ" ಎಂದು ಕೆಳಗಿನ ಹಾಲಿನಲ್ಲಿಯೇ ಕುರ್ಚಿಯಲ್ಲಿ ಕೂಡಿಸಿ ತಾನೂ ಕುಳಿತನು. ಜನಾರ್ದನನ ಅವತಾರವನ್ನೂ ಠೀವಿಯನ್ನೂ ನೋಡಿ ರಾಮಭಂಡಾರಿಗೆ ಆಶ್ಚರ್ಯವಾಯಿತು.

"ರಾಮಭಂಡಾರಿಯವರೇ, ನನ್ನ ಮನೆಯನ್ನೂ ವ್ಯವಹಾರಗಳನ್ನೂ ನೋಡಿ ನಿಮಗೆ ಆಶ್ಚರ್ಯವಾಗುತ್ತಿರಬೇಕು. ನಿಮ್ಮಿಂದ ತೆಂಗಿನ ಗೆರಟೆಗಳನ್ನು

ಕೊಂಡುಕೊಂಡು ಹೋದವನು ಈ ದೂಡ್ಡತನದ ಪರಿಸ್ಥಿತಿಗೆ ಹೇಗೆ ಬಂದನೋ ಎಂದು ನೋಡು ತ್ತಿದ್ದೀರಿ. ಮೊದಲು ನನ್ನ ಆತಿಥ್ಯವನ್ನು ಸ್ವೀಕರಿಸಿರಿ. ಆಮೇಲೆ ಹೇಳುತ್ತೇನೆ." ಎಂದನು ಜನಾರ್ದನ.

ಉತ್ತಮವಾದ ಔತಣದ ಊಟ ಮುಗಿದ ಮೇಲೆ ಅವರಿಬ್ಬರೂ ಕೋಣೆಯಲ್ಲಿ ಆರಾಮವಾಗಿ ಕುಳಿತರು. ಆಗ ಜನಾರ್ದನನು ತನ್ನ ಕಥೆಯನ್ನೆಲ್ಲಾ ಹೇಳಿದನು.

"ನಮ್ಮದು ಜಮೀನ್ದಾರೀ ವಂಶವೇ. ನನ್ನ ತಾತ ತಂದೆಯರು ಹಿಂದೆ ಮುಂದೆ ನೋಡದೆ ಧಾರಾಳವಾಗಿ ದಾನಧರ್ಮ ಮಾಡಿ ಬಡತನವನ್ನು ತಂದುಕೊಂಡರು. ನನಗೆ ಬುದ್ಧಿ ತಿಳಿದ ಕಾಲಕ್ಕೆ ಆ ತಾತ ತಂದೆಯರೂ ಇಲ್ಲ, ಆಸ್ತಿಯೂ ಇಲ್ಲ !

"ಇಲ್ಲಿಗೆ ಹತ್ತಿರದಲ್ಲಿರುವ ಕೋಟೆಹಳ್ಳಿ ಜಮೀನು ದಾರರಾದ ಶಾಮಯ್ಯನವರು ಒಂದುದಿನ ಕುದುರೇ ಗಾಡಿಯಲ್ಲಿ ಬರುತ್ತಿದ್ದಾಗ ಪ್ರಮಾದವಶಾತ್ ಗಾಡಿ ಹಳ್ಳಕ್ಕೆ ಜಾರಿಹೋಯಿತು. ಸಮಯಕ್ಕೆ ಸರಿಯಾಗಿ ಆ ಕಡೆಗೆ ಬಂದ ನಾನು ಅವರನ್ನು ಆನಿಸಿ ಹಿಡಿದೆನು. ಗಾಡಿಯವನೂ ನಾನೂ ಕೂಡಿ ಗಾಡಿಯನ್ನು ಸರಿದಾರಿಗೆ ತಂದು ನಿಲ್ಲಿಸಿದ ಮೇಲೆ, ಅವರನ್ನು ಜಾಗರೂಕತೆಯಿಂದ ಗಾಡಿಯಲ್ಲಿ ಕೂಡಿಸಿ ಹಿಡಿದು ಕೊಂಡು ಅವರ ಮನೆಯ ವರೆಗೂ ಹೋದೆ.

"ಮಾತಿನ ಸಂದರ್ಭದಲ್ಲಿ ಅವರು ನನ್ನ ಪರಿಸ್ಥಿತಿಯನ್ನು ತಿಳಿದು ಬಹಳ ವಿಚಾರ ವ್ಯಕ್ತಪಡಿ ಸಿದರು. ಅವರು ನನಗಾಗಿ ತುಂಬಾ ವ್ಯಸನಪಡು ವುದನ್ನು ನೋಡಿ ನಾನು ಅವರಿಗೆ ಸಮಾಧಾನ ಹೇಳುವ ಉದ್ದೇಶದಿಂದ 'ನನಗೇ ಇಲ್ಲದ ಚಿಂತೆ ನಿಮಗೇಕೆ ಬಿಡೀ. ಮನಸ್ಸಿದ್ದರೆ ಮಾರ್ಗವಿದೆಯಂತೆ. ಎಲ್ಲರೂ ಉಪಯೋಗವಿಲ್ಲವೆಂದು ಬೀಸಾಡುವ ವಸ್ತುಗಳಿಂದ ಕೂಡಾ ಶ್ರೀಮಂತರಾಗಬಹುದು. ನನಗೂ ಒಂದು ಕಾಲ ಬಂದೇ ಬಂದೀತು' ಎಂದೆನು.



"ಆ ಮಾತಿಗೆ ಶಾಮಯ್ಯ ನಗುತ್ತ, 'ಕಾಲ ಬರುವುದೆಂದು ಸುಮ್ಮನೆ ಕುಳಿತರೆ ಹೇಗೆ ? ನೀನು ಹೇಳಿದ ಹಾಗೆ ಬೇಡದ ವಸ್ತುಗಳಿಂದಲೇ ಶ್ರೀಮಂತ ನಾಗಲು ಸಾಧ್ಯವೆಂದು ತೋರಿಸಿದರೆ ನನ್ನ ಒಬ್ಬಳೇ ಮಗಳನ್ನು ನಿನಗೆ ಕೊಟ್ಟು ಮದುವೆ ಮಾಡುತ್ತೇನೆ. ಬೇಕಾದರೆ ಸ್ವಲ್ಪ ಮೂಲಧನ ಕೂಡಾ ಕೊಡು ತ್ತೇನೆ' ಅಂದರು.

"ನನಗೆ ಹಟ ಬಂತು. ಸ್ವಲ್ಪ ಹಣ ಮಾತ್ರ ಅವರ ಕೈಯಿಂದ ಸಾಲ ತೆಗೆದುಕೊಂಡೆ. ಬೊಂಬೆ ಗಳಿಗೂ ಮಡಿಕೆಗಳಿಗೂ ಬಣ್ಣ ಹಚ್ಚುವ ಇಬ್ಬರನ್ನೂ, ಕೆಲಸಜಾಣರಾದ ಬಡಗಿಗಳಿಬ್ಬರನ್ನೂ ಏರ್ಪಡಿಸಿಕೊಂಡೆ. ತೆಂಗಿನ ಚಿಪ್ಪುಗಳನ್ನು ಸೇರಿಸಿ ಅವುಗಳಿಂದ ಬೇರೆಬೇರೆ ಬೊಂಬೆಗಳನ್ನೂ, ಆಟದ ವಸ್ತುಗಳನ್ನೂ, ಸೌಟುಗಳನ್ನೂ ಬಡಗಿಗಳಿಂದ ತಯಾರಿಸಿಕೊಂಡೆ. ಬೊಂಬೆಗಳಿಗೆ ಬಣ್ಣಗಳನು ತಗಲಿಸಿದೆ. ಬಣ್ಣ ಬಣ್ಣದ ಬೊಂಬೆಗಳು ಕದಲುತ್ತ,

ತಲೆಯಲುಗಿಸುತ್ತ ಆಕರ್ಷಣೀಯವಾಗಿದ್ದುದರಿಂದ, ಅವು ಪಟ್ಟಣಗಳಲ್ಲಿ ಭರದಿಂದ ಮಾರಾಟವಾದುವು.

"ಅದೇ ಸಮಯದಲ್ಲಿ ತೆಂಗಿನ ಸೋಗೆಗಳನ್ನು ಕೂಡಾ ತರಿಸಿ, ಕೂಲೀ ಹೆಂಗುಸರನ್ನು ನಿಯಮಿಸಿ ಅವುಗಳಿಂದ ಹಿಡಿಸೂಡಿಗಳನ್ನು ತಯಾರಿಸಿದೆನು. ನನ್ನ ಬೊಂಬೆಗಳಿಗೂ, ಕಸಪೊರಿಕೆಗಳಿಗೂ, ತೆಂಗಿನ ಮರಗಳಿಲ್ಲದ ಮಧ್ಯ ದೇಶದಲ್ಲಿ ಒಳ್ಳೆಯ ಗಿರಾಕಿಗಳು ಬಂದುವು. ಇಲ್ಲಿಯೂ ವ್ಯಾಪಾರವಾಗುತ್ತಿತ್ತು. ಒಂದು ವರ್ಷ ಕಾಲದೊಳಗೆ ಲಾಭವಾಗಿ ಬಂದ ಹಣ ತುಂಬಾ ಸೇರಿತು. ಪ್ರಾರಂಭದಲ್ಲಿ ನನಗೆ ಬೇಕಾದ ಗೆರಟೆಗಳು ನಿಮ್ಮಿಂದಲೇ ದೊರಕಿತಷ್ಟೆ? ನೀವು ತೆಂಗಿನ ಕಾಯಿಯಿಂದ, ಎಣ್ಣೆ ತೆಗೆದು ವ್ಯಾಪಾರ ಮಾಡುವಿರಿ. ಬೇಕಾದಷ್ಟು ಹಣ ಸೇರಿದ ಮೇಲೆ ನಾನು ಈ ಊರಿನಲ್ಲಿಯೇ ನಿವಾಸ ಏರ್ಪಡಿಸಿಕೊಂಡೆ. ಏಕೆಂದರೆ ಇಲ್ಲಿ ತೆಂಗಿನ ಮರಗಳು ಜಾಸ್ತಿ.

"ಜಮೀನ್ದಾರ್ ಶಾಮಯ್ಯನವರು ನನ್ನ ಕೆಲಸವನ್ನು ನೋಡಿ ಮೆಚ್ಚಿಕೊಂಡು, 'ಕೇವಲ ತೆಂಗಿನ ಚಿಪ್ಪುಗಳಿಂದಲೂ, ಸೋಗೆಗಳಿಂದಲೂ ವ್ಯಾಪಾರಮಾಡಿ ಇಷ್ಟು ಹಣ ಸಂಪಾದಿಸಿದೆ ಯೆಂದರೆ ನನಗೆ ನಿಜವಾಗಿಯೂ ಆಶ್ಚರ್ಯ ವಾಗಿದೆ. ಎಲ್ಲರೂ ನಿನ್ನ ಹಾಗೆ ಮಾಡಲು ತೊಡಗಿದರೆ ಮನಸ್ಸು ಮಾಡಿದರೆ ಆಗದ ಕೆಲಸವಿಲ್ಲ ವೆಂಬುದು ನಿಜವಾದೀತು' ಎಂದು ಹೇಳಿ, ಮೊದಲು ಹೇಳಿದ ಪ್ರಕಾರವೇ ಅವರು ತನ್ನ ಮಗಳು ರುಕ್ಮಿಣಿಯನ್ನು ನನಗೆ ಕೊಟ್ಟು ಮದುವೆ ಮಾಡಿದರು.

"ನಾನು ಈಗ ಅವರ ಜಮೀನುದಾರಿ ವ್ಯವಹಾರಗಳನ್ನು ನೋಡುತ್ತ ಅವರದಾದ ಈ ಮನೆಯಲ್ಲೇ ಇದ್ದೇನೆ. ಅವರು ಮಾತ್ರ ಕೋಟೆಹಳ್ಳಿಯಲ್ಲೇ ಇದ್ದಾರೆ. ಇಷ್ಟೇ ನನ್ನ ಕಥೆ."

ರಾಮಭಂಡಾರಿ ಜನಾರ್ದನನ ಕಥೆಯನ್ನು ಕೇಳಿ ತುಂಬಾ ಸಂತೋಷಪಟ್ಟು. "ಯುವಕರಿಗೆಲ್ಲಾ ನೀವು ಒಂದು ಪಾಠ ಕಲಿಸಿದ ಹಾಗಾಗಿದೆ. ಕೆಲಸವಿಲ್ಲದವರಿಗೆ ಕೆಲಸದ ದಾರಿ ತೋರಿಸಿದ್ದೀರಿ. ನಿಮ್ಮ ಹಾಗೆ ಎಲ್ಲರೂ ಒಂದು ಪಥಕವನ್ನು ಆಲೋಚಿಸಿ ಅಳವಡಿಸಿಕೊಂಡರೆ ದೇಶವೇ ಉನ್ನತಿಗೆ ಬರುತ್ತದೆ. ಎಲ್ಲಕ್ಕೂ ಮೊದಲು ಉದಾಸೀನವನ್ನು ಬಿಡಬೇಕು" ಎಂದನು.

ಜನಾರ್ದನನು ನಡೆಸುವ ಗೃಹಪರಿಶ್ರಮಗಳನ್ನು ಕೂಡಾ ರಾಮಭಂಡಾರಿ ಸ್ವಯಂ ನೋಡಿದನು. ತಾನೂ ಒಳ್ಳೆಯ ಪರಿಸ್ಥಿತಿಗೆ ಬಂದು, ಅನೇಕರ ಜೀವನಕ್ಕೆ ದಾರಿ ತೆರೆದ ಜನಾರ್ದನನನ್ನು ಅಭಿನಂದಿಸಿ ತನ್ನ ಮನೆಗೆ ಹೊರಟ ರಾಮಭಂಡಾರಿ.





# ಆಪದ್ರಕ್ಷಕ

ಒಂದು ಊರಿನಲ್ಲಿ ಲಕ್ಷ್ಮೀಪತಿ ಎಂಬ ಗೃಹಸ್ಥ ನಿದ್ದನು. ಸಾಕಷ್ಟು ಧನಿಕನಾಗಿದ್ದ ಅವನು ದಿನಾ ಸಾಯಂಕಾಲ ಕಾಲುವೆಯ ದಂಡೆಯ ಕಡೆಗೆ ವಿಹಾರಕ್ಕೆ ಹೋಗುತ್ತಿದ್ದನು. ಒಂದು ದಿನ ಲಕ್ಷ್ಮೀಪತಿ ಸ್ವಲ್ಪ ಹೆಚ್ಚು ದೂರದವರೆಗೆ ನಡೆದು ಕತ್ತಲೆಬಿದ್ದ ಮೇಲೆ ಮನೆಯ ಕಡೆಗೆ ಹಿಂದಿರುಗುತ್ತಿದ್ದನು. ಆಗ ಮಾವಿನ ತೋಪಿನ ದಾರಿಯಲ್ಲಿ ಇಬ್ಬರು ಕಳ್ಳ ಮನುಷ್ಯರು ಕೈಗಳಲ್ಲಿ ಕತ್ತಿಗಳನ್ನು ತೋರಿಸುತ್ತ ಅವನಿಗೆ ಅಡ್ಡ ಬಂದರು. ಒಬ್ಬನು ಲಕ್ಷ್ಮೀಪತಿಯ ಕೈಗಳನ್ನು ಹಿಂಬದಿಗೆ ಜೋಡಿಸಿ ಬಿಗಿಹಿಡಿದುಕೊಂಡನು. ಎರಡನೇಯವನು ಲಕ್ಷ್ಮೀಪತಿಯ ಜೇಬಿಗೆ ಕೈಹಾಕಿ ಅದರಲ್ಲಿದ್ದ ಹಣವನ್ನೂ ಬೆರಳಿನಲ್ಲಿದ್ದ ಉಂಗುರವನ್ನೂ ಎಳೆದುಕೊಂಡನು.

ಲಕ್ಷ್ಮೀಪತಿ ಆ ದುಷ್ಟರೊಂದಿಗೆ ಎಳೆದಾಡಿಕೊಂಡಿದ್ದಾಗ, "ಇವನ ಕುತ್ತಿಗೆ ಕಡಿದುಹಾಕಿ ಹೋಗಿಬಿಡೋದೇ ಒಳ್ಳೇದು!" ಎಂದನು ಕೈಗಳನ್ನು ಹಿಡಿದುಕೊಂಡಿದ್ದವನು. ಎರಡನೆಯವನು "ಅದೇ ಸರಿ" ಎಂದು ಕುತ್ತಿಗೆಗೆ ಗುರಿ ನೋಡಿ ಕತ್ತಿ ಎತ್ತಿದನು. ಅದನ್ನು ನೋಡಿ "ಅಯ್ಯೋ! ಕಾಪಾಡ್ರೋ!" ಎಂದು ಲಕ್ಷ್ಮೀಪತಿ ಕೆಟ್ಟದನಿಯಿಂದ ಕೂಗಿದನು. ಮರುಕ್ಷಣದಲ್ಲಿ "ಯಾರೋ ಅವರು? ತಂದೆಯಂಥವರನ್ನು ಕೊಲ್ಲಲು ಕೈಯೆತ್ತುವ ಕಟುಕ ಯಾರೋದು?" ಎನ್ನುತ್ತ ಯಾವನೋ ಒಬ್ಬ ಯುವಕ ಓಡುತ್ತಾ ಬಂದು ಒಮ್ಮೆಗೇ ಆ ಕಳ್ಳರ ಮೇಲೆ ಬಿದ್ದನು. ಕಳ್ಳರು ಲಕ್ಷ್ಮೀಪತಿಯನ್ನು ಬಿಟ್ಟು ಆ ಯುವಕನನ್ನು ಇದಿರಿಸಿ ಅವನ ಪೆಟ್ಟುಗಳನ್ನು ತಾಳಿಕೊಳ್ಳಲಾಗದೆ "ಅಯ್ಯೋ ಅಪ್ಪೋ" ಎನ್ನುತ್ತ ಓಡಿಹೋದರು.

ಅರ್ಧ ಸತ್ತವನಂತೆ ಬಿದ್ದಿದ್ದ ಲಕ್ಷ್ಮೀಪತಿ ಆ ಯುವಕನಿಗೆ ಕೈಜೋಡಿಸುತ್ತ, "ಸಮಯಕ್ಕೆ ದೇವರಹಾಗೆ ಬಂದು ಕಾಪಾಡಿದೆ. ನಿನ್ನ ಉಪಕಾರ ಮರೆಯಲಾರೆನಪ್ಪಾ. ದಯಮಾಡಿ ಸ್ವಲ್ಪ ಜತೆಯಲ್ಲಿ ಬಂದು ನನ್ನನ್ನು ನನ್ನ ಮನೇವರೆಗೆ ಸೇರಿಸಿಬಿಡು. ನಿನ್ನ ಪುಣ್ಯ!" ಎಂದು ಕೇಳಿಕೊಂಡನು.

"ಅಯ್ಯೋ! ನಿಮ್ಮಂಥ ಹಿರಿಯರು ಹೀಗೆ ಹೇಳಬಾರದು ಸ್ವಾಮಿ. ನೀವು ನನಗೆ ನಮಸ್ಕಾರ ಮಾಡುವುದುಂಟೇ? ಆಪತ್ತಿನಲ್ಲಿದ್ದರನ್ನು ಕಾಪಾಡದವನು ಮನುಷ್ಯನೇ ಅಲ್ಲ, ನಡೆಯಿರಿ, ನಿಮ್ಮ ಮನೆಯವರೆಗೆ ಬರುತ್ತೇನೆ. ಹೋಗೋಣ" ಎಂದು

ಎಂ. ಕೆ. ಈಶ್ವರರಾವ್



ಯುವಕನು ತನ್ನ ಕೈಯನ್ನು ಆಧಾರ ಕೊಟ್ಟು ಲಕ್ಷ್ಮೀಪತಿಯನ್ನು ಎಬ್ಬಿಸಿ ನಿಧಾನವಾಗಿ ನಡೆಸಿಕೊಂಡು ಹೋದನು.

ದಾರಿಯಲ್ಲಿ ಲಕ್ಷ್ಮೀಪತಿ ಅವನನ್ನು ಕುರಿತು ವಿಚಾರಿಸುತ್ತ ಸ್ವಲ್ಪ ಸಂಗತಿಯನ್ನು ತಿಳಿದುಕೊಂಡನು. ಅವನ ಹೆಸರು ಧರ್ಮರಾಜ. ಚಿಕ್ಕಂದಿನಲ್ಲೇ ತಂದೆ ತಾಯಿಗಳನ್ನು ಕಳೆದುಕೊಂಡವನು. ಊರವರ ಸಹಾಯದಿಂದ ಓದಿಕೊಂಡು, ಉದ್ಯೋಗ ಹುಡುಕಿಕೊಂಡು ಈ ಊರಿಗೆ ಬಂದಿದ್ದನು. ಎಲ್ಲಿ ವಾಸ ಮಾಡುವುದೆಂದು ಇನ್ನೂ ನಿರ್ಣಯಿಸಿಲ್ಲವಂತೆ.

ಮನೆಗೆ ಹೋದ ಕೂಡಲೇ ಲಕ್ಷ್ಮೀಪತಿ ತನ್ನ ಮಗಳ ಹತ್ತಿರ ನಡೆದ ಸಂಗತಿಯನ್ನೆಲ್ಲಾ ಹೇಳಿ, "ಈ ಧರ್ಮರಾಜನು ಪುಣ್ಯಾತ್ಮ! ಸಮಯಕ್ಕೆ ಬಾರದೇ ಹೋಗಿದ್ದರೆ, ಇಷ್ಟು ಹೊತ್ತಿಗೆ ನನ್ನ ಶವವೇ ಮನೆಗೆ ಬರುತ್ತಿತ್ತು! ತುಂಬ ಧೈರ್ಯಶಾಲಿ! ಗಟ್ಟಿಗ ನಮ್ಮಾ!" ಎಂದನು.

ಅದನ್ನು ಕೇಳಿ ಅವನ ಮಗಳು ಕಲ್ಯಾಣಿಗೆ ಕಣ್ಣೀರು ತುಂಬಿತು. ಅವಳು ಗದ್ಗದ ಕಂಠದಿಂದ, "ಅದಕ್ಕೇ ಕತ್ತಲೆ ಬಿದ್ದ ಮೇಲೆ ಒಬ್ಬರೇ ತಿರುಗ ಬಾರದೂಂತ ನಿಮಗೆ ಹೇಳುತ್ತಾ ಇದ್ದೇನೆ. ಇನ್ನು ಮೊಂಡಿ ಧೈರ್ಯ ಬೇಡ ಅಪ್ಪಾ. ಈ ದಿನ ನನ್ನ ಅದೃಷ್ಟ ಚೆನ್ನಾಗಿತ್ತು. ಸಮಯಕ್ಕೆ ಅವರು ಬಂದು ನಿಮ್ಮನ್ನು ಉಳಿಸಿದರು! ತುಂಬ ಒಳ್ಳೆಯವರು!" ಎಂದು ಹೇಳಿ ಧರ್ಮರಾಜನಿಗೆ ಕೃತಜ್ಞತೆ ಹೇಳಿದಳು.

ಊಟ ಮಾಡುವಾಗ ಲಕ್ಷ್ಮೀಪತಿ ಧರ್ಮರಾಜನೊಂದಿಗೆ, "ನನಗೆ ಲಕ್ಷಗಟ್ಲೆ ಆಸ್ತಿಯೇನೋ ಇದೆ. ಆದರೆ ನಮ್ಮ ಕಲ್ಯಾಣಿಯನ್ನು ಒಬ್ಬ ಉತ್ತಮ ಧರ್ಮಿಷ್ಠನ ಕೈಗೆ ಹಾಕುವವರೆಗೂ ನನಗೆ ನೆಮ್ಮದಿ ಇಲ್ಲ," ಎಂದನು. "ಹೌದು. ಸಹಜತಾನೆ? ಅದು ನಿಮ್ಮಂಥವರಿಗೆ ಇರಬೇಕಾದ ಚಿಂತೆಯೇ" ಎಂದನು ಧರ್ಮರಾಜ.

ಮರುದಿನ ಬೆಳಿಗ್ಗೆ ಧರ್ಮರಾಜನು ಲಕ್ಷ್ಮೀಪತಿಯೊಂದಿಗೆ, "ಸರಿ ಇನ್ನು ಅಪ್ಪಣೆ ಕೊಡಿ, ನಾನು ಹೊರಡುತ್ತೇನೆ, ಉದ್ಯೋಗ ಹುಡುಕುವ ಕೆಲಸ ನೋಡುತ್ತೇನೆ." ಎಂದನು.

"ಇನ್ನು ಹುಡುಕಲಿಕ್ಕೇನಿದೆಯಪ್ಪಾ? ಉದ್ಯೋಗ ಸಿಕ್ಕಿದ ಹಾಗೇ ಅಂದುಕೋ. ಈ ಊರಿನಲ್ಲಿ ನನಗೆ ನಾಲ್ಕು ಜವುಳಿ ಅಂಗಡಿಗಳಿವೆ. ಅದರಲ್ಲಿ ಒಂದನ್ನು ನೀನೇ ನೋಡುವ ಕೆಲಸ ಮಾಡು." ಎಂದನು ಲಕ್ಷ್ಮೀಪತಿ. ಧರ್ಮರಾಜನು ಸ್ವಲ್ಪ ಹಿಂದೆಮುಂದೆ ನೋಡಿ, ದಾಕ್ಷಿಣ್ಯ ಪಟ್ಟು, ಸ್ವಲ್ಪ ಒತ್ತಾಯಕ್ಕೊಳಗಾಗಿ ಒಪ್ಪಿಕೊಂಡನು.

ತಂದೆ ಒಳ್ಳೆಯ ಕೆಲಸವನ್ನೇ ಮಾಡಿದರೆಂದು ಕಲ್ಯಾಣಿ ಮೆಚ್ಚಿಕೊಂಡಳು. ಕೆಲವು ದಿನಗಳು ಕಳೆಯುತ್ತಿರಲು, ಕಲ್ಯಾಣಿಗೆ ಧರ್ಮರಾಜನ ಮೇಲಿದ್ದ ಸದಭಿಪ್ರಾಯವು ಬತ್ತಿ ಹೋಗ ತೊಡಗಿತು. ಅವನು ಅವಳ ಮುಂದೆ ತಂದೆ ಮನೆಯಲ್ಲಿರುವಾಗ ಒಂದು

ರೀತಿಯಾಗಿಯೂ, ತಂದೆ ಇಲ್ಲದಿದ್ದಾಗ ಇನ್ನೊಂದು ರೀತಿಯಾಗಿಯೂ ಪ್ರವರ್ತಿಸುತ್ತಿದ್ದನು. ಕಲ್ಯಾಣಿಯನ್ನು ಆಕರ್ಷಿಸಲು ಏನೋ ಮಂಗಚೇಷ್ಟೆ ಮಾಡುತ್ತಿದ್ದನು. ಇದರಿಂದ ಕಲ್ಯಾಣಿಗೆ ಅವನ ಮೇಲೆ ಕೆಟ್ಟ ಅಭಿಪ್ರಾಯವು ಬರತೊಡಗಿತು.

ಅವಳು ಒಂದು ದಿನ ತಂದೆಯೊಂದಿಗೆ, "ಈ ಧರ್ಮರಾಜರು, ನಮ್ಮ ಮನೆಯಲ್ಲಿ ಇನ್ನೆಷ್ಟು ದಿನ ಇರುತ್ತಾರಪ್ಪಾ? ಅವರಿಗೊಂದು ಬೇರೆ ಮನೆ ನೋಡಿ ಕೊಡಬಾರದೇ ? ಅವರು ಸ್ವತಂತ್ರವಾಗಿರಲು ಅದೇ ಒಳ್ಳೇದಲ್ಲವೆ ? " ಎಂದಳು.

"ಅದೂ ನಿಜವೇ ಅಮ್ಮ! ಅವನು ಪರಕೀಯನಾಗಿ ಎಷ್ಟು ಕಾಲ ನಮ್ಮ ಮನೇಲಿ ಇರಬಹುದು? ಅವನು ನಿಜಕ್ಕೂ ಧರ್ಮರಾಜನೇ. ನಿನ್ನನ್ನು ಮದುವೆಯಾಗಲು ಇಷ್ಟವಿರುವ ಹಾಗಿದೆ ಅವನಿಗೆ. ನಮ್ಮ ಇಷ್ಟದಂತೆ ಮನೆಯಳಿಯನಾಗಿ ಕೂಡ ಇದ್ದಾನು. ಅಂಥವನು ಸಿಗುವುದು ಕಷ್ಟ. ಏನನ್ನುತ್ತೀಯಮ್ಮಾ? " ಎಂದನು ಲಕ್ಷ್ಮೀಪತಿ.

ತಂದೆಯ ಮಾತು ಕೇಳಿ ಕಲ್ಯಾಣಿ ಬೆರಗಾಗಿ ಬಾಯಿ ಕಟ್ಟಿ ಹೋದಳು. ತನ್ನೊಂದಿಗೆ ಏನೂ ಹೇಳದೆ ತನ್ನ ತಂದೆ ಈ ವಿಷಯವನ್ನು ಧರ್ಮರಾಜನೊಂದಿಗೆ ಪ್ರಸ್ತಾವಿಸಿರುವುದನ್ನು ತಿಳಿದು ತನಗೆ ಅವಮಾನ ಮಾಡಿದಂತೆ ಅವಳಿಗೆ ತೋರಿತು. ಅವಳು ಈ ಮೊದಲೇ ಅವಳ ಸ್ನೇಹಿತೆಯ ಅಣ್ಣನಾದ ರಾಜೇಶನನ್ನು ಪ್ರೇಮಿಸಿದ್ದಳು. ಆದರೆ ಆ ಸಂಗತಿಯನ್ನು ಅವಳು ತಂದೆಗೆ ಇನ್ನೂ ತಿಳಿಸಿರಲಿಲ್ಲ, ಅವಳು ಸ್ವಲ್ಪ ಹೊತ್ತು ಸುಮ್ಮನಿದ್ದು, "ಅಲ್ಲ ಅಪ್ಪಾ, ಧರ್ಮರಾಜರು ನಿಜಕ್ಕೂ ಧರ್ಮರಾಜರು ಅಂತ ನಿಮಗೆ ಹೇಗೆ ಗೊತ್ತಾಯಿತು? " ಎಂದು ಕೇಳಿದಳು.

ಈ ಪ್ರಶ್ನೆ ಕೇಳಿ ಲಕ್ಷ್ಮೀಪತಿಗೆ ಕೋಪ ಬಂತು. "ಎಂಥ ಹುಚ್ಚು ಪ್ರಶ್ನೆ ನಿನ್ನದು? ನನಗೆ ಮನುಷ್ಯರ ವಿಷಯ ಅರ್ಥವಾಗುತ್ತದೆ. ಏನೇನೋ ಯೋಚಿಸ ಬೇಡ. ಮುಂದಿನ ತಿಂಗಳಿನಲ್ಲಿ ಅವನೊಂದಿಗೆ ನಿನ್ನ ಮದುವೆ ಖಂಡಿತ! " ಎಂದನು.



ಅವಳು ತಂದೆಯೊಂದಿಗೆ ಮತ್ತೇನೂ ಹೇಳದೆ, ಸಟಕ್ಕನೆದ್ದು ಹೊರಗೆ ಹೋದಳು. ಆಗ ಧರ್ಮರಾಜನು ತಮ್ಮ ಸಂಭಾಷಣೆಗಳನ್ನು ಕೇಳಿಕೊಂಡಿದ್ದನೆಂದು ಅವಳಿಗೆ ಗೊತ್ತಾಯಿತು. ಅವಳನ್ನು ಕಂಡ ಕೂಡಲೇ ಧರ್ಮರಾಜನೂ ಥಕ್ಕನೆ ತಿರುಗಿ ತನ್ನ ಕೋಣೆಗೆ ಹೊಕ್ಕನು.

ಆ ದಿನ ರಾತ್ರಿ ಕಲ್ಯಾಣಿಗೆ ಏನೇನೋ ಆಲೋಚನೆಯಿಂದ ನಿದ್ದೆ ಬರಲಿಲ್ಲ. ಈ ಸಂದರ್ಭದಲ್ಲಿ ತನ್ನ ಕರ್ತವ್ಯವೇನೆಂದು ತನ್ನ ಪ್ರಿಯನಾದ ರಾಜೇಶನೊಂದಿಗೆ ಚರ್ಚಿಸಿ ಒಂದು ನಿಶ್ಚಯಕ್ಕೆ ಬರಬೇಕೆಂದುಕೊಂಡಳು.

ಅಕಸ್ಮಾತ್ತಾಗಿ ಧರ್ಮರಾಜನ ಕೋಣೆಯಿಂದ ಕೆಟ್ಟದೊಂದು ಆರ್ತನಾದವು ಕೇಳಿ ಬಂತು. ಎಚ್ಚರದಲ್ಲಿದ್ದ ಕಲ್ಯಾಣಿ ಅವನಿಗೇನಾಯಿತೋ ಎಂದು



ಹೆದರಿ ಹಾರಿ ಎದ್ದು ಅವನ ಕೋಣೆಗೆ ಓಡಿದಳು. ಮಸಕು ಕತ್ತಲೆಯಲ್ಲಿ ಮೊದಲು ಏನೂ ಗೊತ್ತಾಗಲಿಲ್ಲ. ಆ ಮೇಲೆ ಗೊತ್ತಾಗಿ ನಗು ಬಂತು.

ಧರ್ಮರಾಜನು ಮಂಚದ ಒಂದು ಬದಿಯಲ್ಲಿ ಮುದುಡಿ ಕುಳಿತು ನಡುಗುತ್ತಲಿದ್ದನು. ಅವನ ಗಂಟಲಿನಿಂದಲೇ ಆ ಕೆಟ್ಟ ಸ್ವರ ಹೊರಟಿತ್ತು. ಮಂಚದ ಇನ್ನೊಂದು ತುದಿಯಲ್ಲಿ ಒಂದು ಬೆಕ್ಕು ಕುಳಿತು ಅವನನ್ನು ನೋಡುತ್ತಿತ್ತು. ಕಲ್ಯಾಣಿಯನ್ನು ನೋಡಿದ ಕೂಡಲೇ ಧರ್ಮರಾಜನು, "ಆ ಬೆಕ್ಕು! ಓಡಿಸು! ಓಡಿಸು!" ಎಂದನು ನಡುಗುವ ಸ್ವರದಿಂದ. ಒಂದು ಬೆಕ್ಕನ್ನು ನೋಡಿ ಹೆದರುವವನನ್ನು ನೋಡಿ ಕಲ್ಯಾಣಿಗೆ ಆಶ್ಚರ್ಯವಾಯಿತು. ತಂದೆಯ ಪ್ರಾಣವನ್ನು ಕಾಪಾಡಿದವನು ಇಷ್ಟು ಪುಕ್ಕನೆ ?

"ಅದು ಏನೂ ಮಾಡದು. ಸಾಕುವ ಬೆಕ್ಕು." ಎನ್ನುತ್ತ ಕಲ್ಯಾಣಿ ಬೆಕ್ಕನ್ನು ಎತ್ತಿಕೊಂಡಳು. "ನನಗೆ ಬೆಕ್ಕೆಂದರೆ ತುಂಬ ಅಸಹ್ಯ! ಮುಟ್ಟಲಾರೆ. ಅದೇನೋ ಮಾಡುತ್ತದೆಂದು ಹೆದರಿಕೆ ಏನಿಲ್ಲ." ಎಂದನು ಧರ್ಮರಾಜ.

ಕಲ್ಯಾಣಿಗೆ ಅವನ ಮಾತಿನಲ್ಲಿ ನಂಬುಗೆ ಯಾಗಲಿಲ್ಲ. ಅವಳು ಬೆಕ್ಕನ್ನು ಎತ್ತಿಕೊಂಡು ತನ್ನ ಕೋಣೆಗೆ ಹೊರಟು ಹೋದಳು.

ಮರುದಿನ ಅವಳು ರಾಜೇಶನನ್ನು ನೋಡಿ, ರಾತ್ರಿಯಲ್ಲಿ ನಡೆದ ಸಂಗತಿಯನ್ನು ಅವನೊಂದಿಗೆ ಹೇಳಿ, "ಧರ್ಮರಾಜನು ನನ್ನ ಅಪ್ಪನನ್ನು ನಂಬಿಸಿದ್ದಾನೆ. ಒಂದು ಬೆಕ್ಕನ್ನು ನೋಡಿ ಸಾಯುವವನ ಹಾಗೆ ಕೂಗಿದವನು, ತಂದೆಯನ್ನು ಕೊಲೆಗಡಕರಿಂದ ಹೇಗೆ ಕಾಪಾಡಿದನೋ? " ಎಂದಳು.

"ಚಿಂತಿಸ ಬೇಡ. ಅವನ ಗುಟ್ಟು ನಾನು ರಟ್ಟು ಮಾಡುತ್ತೇನೆ. ನಾವು ಮೊದಲು ಒಂದು ವಿಷಯವನ್ನು ಸ್ಪಷ್ಟ ಪಡಿಸಿಕೊಳ್ಳ ಬೇಕು." ಎಂದು ರಾಜೇಶನು ಅವಳಿಗೆ ಒಂದು ಆಲೋಚನೆಯನ್ನು ಹೇಳಿದನು. ಆಗಲೆಂದು ಅವಳೂ ಒಪ್ಪಿಕೊಂಡಳು.

ಮರುದಿನ ಸಾಯಂಕಾಲ ಕಲ್ಯಾಣಿ ಧರ್ಮರಾಜನೊಂದಿಗೆ "ಬೆಟ್ಟದ ಕಾಮಾಕ್ಷಮ್ಮನ ಗುಡಿಗೆ ಹೋಗಬೇಕೆಂದು ಮಾಡಿದ್ದೇನೆ. ನನ್ನ ಜತೆಯಲ್ಲಿ ಬರುತ್ತೀರಾ? " ಎಂದು ಕೇಳಿದಳು.

ಧರ್ಮರಾಜನು ಸಂತೋಷದಿಂದ ಹೊರಡಲು ಒಪ್ಪಿದನು. ಅವರಿಬ್ಬರೂ ಬೆಟ್ಟ ಹತ್ತಿ ದೇವಿಯ ದರ್ಶನ ಮಾಡಿಯಾದ ಮೇಲೆ, ಬೆಟ್ಟದಿಂದ ಇಳಿಯುವಾಗ ಕತ್ತಲಾಯಿತು.

ಆಗ ಒಂದು ಮರದ ಹಿಂದೆ ಅಡಗಿದ್ದ ರಾಜೇಶನು ತಟ್ಟನೆ ಅವರ ಮುಂದೆ ಬಂದು ಅಡ್ಡಗಟ್ಟಿ ಕಲ್ಯಾಣಿಯ ಕೊರಳಲ್ಲಿದ್ದ ಒಂದು ಹಾರವನ್ನು ಎಳೆದು ಕಿತ್ತುಕೊಂಡನು.

"ಅಯ್ಯೋ! ಹಾರ! ಕಳ್ಳ! ಹಿಡೀರಿ! ಹತ್ತು ಸಾವಿರದ ಹಾರ!" ಎಂದು ಕಲ್ಯಾಣಿ ಕೂಗಿದಳು. ಆದರೆ ರಾಜೇಶನು ಓಡಿ ಹೋಗುವ ಪ್ರಯತ್ನ

ಮಾಡದೆ ಅಲ್ಲೇ ನಿಂತು ಧರ್ಮರಾಜನ ಮೇಲೆ ಕಣ್ಣು ತಿರುಗಿಸುತ್ತ, "ಬರುತ್ತೀಯಾ ನನ್ನ ಮೇಲೆ? ಬಾ! ಕುತ್ತಿಗೆ ಹಿಸುಕಿ ನಿನ್ನ ಶವವನ್ನು ಬೆಟ್ಟದ ಕಣಿವೆಗೆ ಬಿಸುಡುತ್ತೇನೆ. ಜೀವದ ಆಸೆ ಇಲ್ಲದಿದ್ದರೆ ಬಾ!" ಎಂದು ಸಡ್ಡು ಹೊಡೆದನು.

ಧರ್ಮರಾಜನು ನಿಂತ ಸ್ಥಳದಿಂದ ಕದಲದೆ ಬೆವತು ನಡುಗುತ್ತಿದ್ದನು. ಯಾರೋ ಆ ಕಡೆಗೆ ಬರುವುದನ್ನು ನೋಡಿ ರಾಜೇಶನು ಮರಗಳಾಚೆಗೆ ಹೊರಟು ಹೋದನು.

"ಬದುಕಿದೆವಪ್ಪ! ಹಾರ ಹೋದರೆ ಹೋಯಿತು. ಪ್ರಾಣ ಹೋದರೆ ಬರುತ್ತೆಯೆ? ಇವತ್ತು ಹೊರಟ ಗಳಿಗೆ ಚೆನ್ನಾಗಿಲ್ಲ. ನಡೆಯಿರಿ, ಮನೆಗೆ ಹೋಗೋಣ" ಎಂದಳು ಕಲ್ಯಾಣಿ.

ಮರುದಿನ ಕಲ್ಯಾಣಿ ರಾಜೇಶನನ್ನು ಸಂಧಿಸಿದಾಗ, ರಾಜೇಶನು ನಗುತ್ತ "ಗೊತ್ತಾಯಿತಲ್ಲ? ಧರ್ಮ ರಾಜನು ಕೇವಲ ಪುಕ್ಕ ಮನುಷ್ಯ. ಏನೋ ಹಣ ಕೊಟ್ಟು ಕೊಲೆಗಡುಕ ನಾಟಕವಾಡಿಸಿ, ನಿಮ್ಮ ಮನೆಗೆ ಸೇರಿ, ನಿನ್ನನ್ನು ಮದುವೆಯಾಗಿ ನಿಮ್ಮ ಎಲ್ಲಾ ಆಸ್ತಿಗೂ ವಾರಸನಾಗಬೇಕೆಂದು ಈ ಉಪಾಯ ಮಾಡಿದ್ದಾನೆ. ಅವನ ಆಟ ನಾನು ನಿಲ್ಲಿಸುತ್ತೇನೆ. ನೀನು ಹೀಗೆ ಮಾಡು" ಎಂದು ಅವಳಿಗೆ ಮತ್ತೊಂದು ಆಲೋಚನೆ ಹೇಳಿದನು.

ಮರುದಿನ ಸಾಯಂಕಾಲ ಧರ್ಮರಾಜನು ಮನೆಯಲ್ಲಿಲ್ಲದ ಸಮಯದಲ್ಲಿ ರಾಜೇಶನು ಲಕ್ಷ್ಮಿಪತಿಯ ಮನೆಗೆ ಬಂದು, ಒಂದು ಮುಖ್ಯ ವಿಷಯ ರಹಸ್ಯವಾಗಿ ಹೇಳಲು ಬಂದಿರುವೆನೆಂದನು. ಲಕ್ಷ್ಮಿಪತಿ ಅವನನ್ನು ತನ ಕೋಣೆಗೆ ಕರೆಯಿಸಿ ಏನೆಂದು ಕೇಳಿದನು.

"ನನ್ನ ಹೆಸರು ರಾಜೇಶ. ಗೋಪಾಲಯ್ಯನವರ ಮಗ. ಈ ಊರಿನಲ್ಲೇ ಇದ್ದೇವೆ. ನಿಮ್ಮ ಮನೆಯೊಳಗೆ ಸೇರಿಕೊಂಡಿರುವ ಧರ್ಮರಾಜನನ್ನು ಕುರಿತು



ಹೆಚ್ಚಿನ ವಿವರ ನನಗೆ ಗೊತ್ತಾಗಿದೆ. ನಿಮ್ಮ ಒಳ್ಳೆಯದಕ್ಕೆ ಅವನ ನಿಜರೂಪ ತಿಳಿಯ ಬೇಕಾದುದು ನಿಮಗೂ ಆಗತ್ಯವೆಂದು ಭಾವಿಸುತ್ತೇನೆ. ದಯವಿಟ್ಟು ನೀವು ನನ್ನೊಂದಿಗೆ ಬರಬೇಕು." ಎಂದನು.

ಲಕ್ಷ್ಮಿಪತಿಗೆ ಅವನೊಂದಿಗೆ ಹೋಗಬೇಕೆಂದು ಮೊದಲು ತೋರಲಿಲ್ಲ, ಆದರೆ ಅವನ ಮಾತಿನ ಹಿಂದೆ ಏನೋ ಭಯಂಕರ ರಹಸ್ಯವಿರಬೇಕೆಂದು ತೋರಿದುದರಿಂದ ಅವನ ಹಿಂದೆ ಹೋದನು.

ಕತ್ತಲೆಯಾದ ಮೇಲೆ ಧರ್ಮರಾಜನು ಮನೆಗೆ ಬಂದನು. ಆಗ ಕಲ್ಯಾಣಿ ಅವನೊಂದಿಗೆ, "ನಿಮ್ಮನ್ನು ವಿಚಾರಿಸಿ ಕೊಂಡು ಯಾರೋ ಇಬ್ಬರು ಬಂದರು. ಅವರು ನಿಮಗೇನೋ ದೊಡ್ಡ ಉಪಕಾರ ಮಾಡಿದ್ದಾರಂತೆ. ಅದಕ್ಕೆತಕ್ಕ ಪ್ರತಿಫಲ ನಿಮ್ಮಿಂದ ಅವರಿಗೆ ಮುಟ್ಟಲಿಲ್ಲವಂತೆ. ಅವರು ಗೋಪಾಲಯ್ಯನವರ ಮನೆಯಲ್ಲಿರುತ್ತೇವೆಂದರು. ಹೋಗಿ ನೋಡಿ ಬನ್ನಿ" ಎಂದು ಹೇಳಿ ಗೋಪಾಲಯ್ಯನ ಮನೆಯ ಗುರುತನ್ನು

ಹೇಳಿದಳು. ಅವಳ ಮಾತು ಕೇಳುತ್ತಿದ್ದಂತೆ ಧರ್ಮರಾಜನ ಮುಖದಲ್ಲಿ ಬಣ್ಣ ಬದಲಾವಣೆಯುಂಟಾಯಿತು. ಅವನು ಕೂಡಲೇ ಗೋಪಾಲಯ್ಯನ ಮನೆಗೆ ಹೊರಟನು. ಅಲ್ಲಿ ಮುಂದಿನ ಕೋಣೆಯಲ್ಲಿ, ದೀಪವನ್ನು ಸಣ್ಣದು ಮಾಡಿಕೊಂಡು ರಾಜೇಶನೂ ಲಕ್ಷ್ಮೀಪತಿಯೂ ಕುಳಿತಿದ್ದರು. "ಇನ್ನು ಸ್ವಲ್ಪ ಹೊತ್ತಿನಲ್ಲೇ ನಿಮ್ಮ ಧರ್ಮರಾಜ ಇಲ್ಲಿಗೆ ಬರುತ್ತಾನೆ. ಅವನು ನಮ್ಮೊಡನೆ ಹೇಳುವ ಮಾತುಗಳನ್ನು ಮನಸ್ಸಿಟ್ಟು ಕೇಳಿರಿ" ಎಂದನು ರಾಜೇಶ ಲಕ್ಷ್ಮೀಪತಿ ಯೊಂದಿಗೆ.

"ಯಾರು ನನ್ನನ್ನು ವಿಚಾರಿಸಿ ಕೊಂಡು ಬಂದವರು ?" ಎಂದು ಧರ್ಮರಾಜನು ಅಲ್ಲಿದ್ದ ಒಬ್ಬ ಆಳನ್ನು ಕೇಳಲು, "ಒಳಗಿದ್ದಾರೆ. ನೀವೇ ಧರ್ಮರಾಜರೊ?" ಎಂದು ಆಳು ಆ ಕೋಣೆಯನ್ನು ತೋರಿಸಿದನು.

ಧರ್ಮರಾಜನು ಆ ಕೋಣೆಯನ್ನು ಹೊಕ್ಕು ಮಸುಕು ಕತ್ತಲೆಯಲ್ಲಿ ಕುಳಿತ ಇಬ್ಬರನ್ನು ನೋಡಿ ಕೋಪದಿಂದ, "ನಿಮಗೇನಾದರೂ ಬುದ್ಧಿ ಮಣ್ಣು ತಿಂದಿತೇ? ಮದುವೆಯಾಗುವ ಮೊದಲೇ ನೆಟ್ಟಗೆ ಮಾವಯ್ಯನ ಮನೆಗೇ ಬಂದು ಬಿಡುವುದೇ? ಅವರು ನಿಮ್ಮ ಗುರುತು ಹಿಡಿದಿದ್ದರೆ ಕೆಲಸ ಕೆಡುತ್ತಿತ್ತಲ್ಲ? ನೀವು ಮಾಡಿದ್ದಕ್ಕೆ ಎರಡು ಪಾಲು ನಿಮಗೆ ಆಗಲೇ ಕೊಟ್ಟಿದ್ದೇನೆ. ನಿಮ್ಮ ಆಸೆಗಾದರೂ ಒಂದು ಲೆಕ್ಕ ಬೇಡಾ? ಮದುವೆಯಾಗಲಿ. ಆ ಮೇಲೆ ಆ ಮುದುಕನನ್ನು ಮೂಲೆಗೆ ಸೇರಿಸಿ ಯಜಮಾನಿಕೆ ನನಗೆ ಬರುತ್ತೆ, ಅದುವರೆಗೆ ಇತ್ತ ಬರಲೇ ಬೇಡಿ. ಅಸಲಿಗೇ ಮೋಸ ಬಂದೀತು ಗೊತ್ತಾ!" ಎಂದೆಲ್ಲ ಬೊಗಳಿದನು.

ರಾಜೇಶನು ನಿಧಾನವಾಗಿ ದೀಪವನ್ನು ದೊಡ್ಡದು ಮಾಡಿದನು. ಲಕ್ಷ್ಮೀಪತಿಯನ್ನೂ, ರಾಜೇಶನನ್ನೂ ನೋಡಿ ಧರ್ಮರಾಜನ ಗಂಟಲೊಣಗಿ ಮುಖ ಕಪ್ಪಗಾಯಿತು.

ಆಗ ಕಲ್ಯಾಣಿ ಒಳಗೆ ಬಂದು "ನೋಡಿದಿರಾ ಅಪ್ಪಾ! ಸಾಕ್ಷಾತ್ ಧರ್ಮರಾಜನೆಂದು ನಮ್ಮ ಮನೆಗೆ ಬಂದು ಸೇರಿದ ಮೋಸಗಾರನನ್ನು ತಲೆ ಮೇಲೆ ಹೊತ್ತುಕೊಂಡಿರಲ್ಲಾ? ಇವನ ಮೋಸದಿಂದ ಈ ರಾಜೇಶರು ನಮ್ಮನ್ನು ಕಾಪಾಡದಿದ್ದರೆ ನಮ್ಮ ಪಾಡು ನಾಯಿ ಪಾಡಾಗುತಿತ್ತು." ಎಂದಳು.

ಲಕ್ಷ್ಮೀಪತಿ ಧರ್ಮರಾಜನನ್ನು ಅಸಹ್ಯವಾಗಿ ನೋಡಿ, "ನೀನು ಕೂಡಲೇ ನನ್ನೆದುರಿನಿಂದ ಓಡು. ಇಲ್ಲದಿದ್ದರೆ ರಕ್ಷಕ ಭಟರಿಗೆ ಒಪ್ಪಿಸುತ್ತೇನೆ." ಎಂದನು.

ಎಡೆಸಿಕ್ಕಿದ್ದೇ ದೊಡ್ಡದೆಂದು ಧರ್ಮರಾಜನು ಅಲ್ಲಿಂದ ಓಡಿ ಹೋದನು.

ಆಮೇಲೆ ಸಾವಧಾನವಾಗಿ ಕಲ್ಯಾಣಿ ತನ್ನ ಹೃದ್ಗತವನ್ನು ತಂದೆಗೆ ತಿಳಿಸಿದಳು. ರಾಜೇಶನಿಗೆ ಅವಳನ್ನು ಕೊಟ್ಟು ಮದುವೆಮಾಡಲು ಲಕ್ಷ್ಮೀಪತಿ ಒಪ್ಪಿದನು.





# ತಾಯಿಯ ಮಾತು

ಒಂದು ಊರಿನಲ್ಲಿ ಶಾರದಮ್ಮನೆಂಬ ವಿತಂತು ಹೆಂಗುಸಿದ್ದಳು. ಅವಳಿಗೆ ರಾಮಪ್ಪನೆಂಬ ಒಬ್ಬ ಮಗನಿದ್ದನು. ಆ ಮಗನು ತಾಯಿ ಶಾರದಮ್ಮನ ಆಶೆಗಳಿಗೆಲ್ಲ ಆಧಾರ ಭೂತನಾಗಿದ್ದನು. ಸಾಕಷ್ಟು ವಿದ್ಯಾ ಬುದ್ಧಿ ಗಳಿಂದ ಪ್ರಾಯಕ್ಕೆ ಬಂದ ಮಗನಿಗೆ ಒಳ್ಳೆಯ ಸಂಬಂಧವನ್ನು ನೋಡಿ ಮದುವೆ ಮಾಡಿದಳು. ಈ ಸಂಬಂಧದ ನೆವನದಲ್ಲಿ ಶಾರದಮ್ಮ ಚಾತುರ್ಯದ ಮಾತುಗಳಿಂದ ಸಾಧ್ಯವಾದಷ್ಟು ನೆಂಟರಿಂದ ಚೆನ್ನಾಗಿಯೇ ಹಿಂಡಿಕೊಂಡಳು. ಮಗಳಿಗೆ ಮದುವೆ ಮಾಡಿ ರಾಮಪ್ಪನ ಮಾವಯ್ಯ ದಿವಾಳಿಯೇ ಆದನು.

ಯುಗಾದಿ ಹಬ್ಬ ಬಂದಿತು. ಮದುವೆಯಾದ ದಂಪತಿಗಳಿಗೆ ಅದು ಹೊಸ ಯುಗಾದಿ. ಅಂತೆಯೇ ರಾಮಪ್ಪನ ಮಾವಯ್ಯ ಅಳಿಯನನ್ನೂ ಮಗಳನ್ನೂ ಯುಗಾದಿ ಹಬ್ಬಕ್ಕೆ ಬರಬೇಕೆಂದು ಆಹ್ವಾನ ಮಾಡಿದನು.

ಹೊರಡುವ ಮೊದಲು ಶಾರದಮ್ಮ ಮಗನನ್ನು ಮರೆಯಾಗಿ ಕರೆದು, "ಮಗನೇ, ಯುಗಾದಿ ಹಬ್ಬಕ್ಕೆ ಉಂಗುರ ಮಾಡಿಸಿ ಹಾಕಬೇಕೆಂದು ಮಾವಯ್ಯನನ್ನು ಕೇಳು. ಹೊಸ ಅಳಿಯನ ಕೋರಿಕೆ ತೀರಿಸದೇ ಇರಲಾರರು" ಎಂದಳು. ತಾಯಿಯ ಮಾತು ಕೇಳಿ ರಾಮಪ್ಪನು ಬೇಸರದಿಂದ, "ಅಮ್ಮಾ, ಈಗಾಗಲೇ ಮದುವೆಗಾಗಿ ವಿಪರೀತ ಖರ್ಚು ಮಾಡಿ ಸೋತು ಹೋಗಿದ್ದಾರೆ. ಅಲ್ಲದೆ ಮದುವೇ ಸಮಯಕ್ಕೆ ಉಂಗುರ ಕೊಟ್ಟಿದ್ದಾರಲ್ಲ?" ಎಂದನು.

"ನೋಡಪ್ಪಾ, ನಿನ್ನ ಬೆರಳುಗಳಲ್ಲಿ ಜೋಡುಂಗುರ ನೋಡಬೇಕೆಂದು ನನ್ನ ಆಸೆ. ತಾಯಿಯ ಆಸೆ ನೆರವೇರಿಸುವುದು ಮಗನ ಕರ್ತವ್ಯ. ಹೆಂಡತಿಯ ಆಸೆ ತೀರಿಸುವುದು ಗಂಡನ ಕರ್ತವ್ಯ" ಎಂದಳು ತಾಯಿ.

"ಸರಿ, ನೋಡುತ್ತೇನೆ" ಎಂದು ಹೇಳಿ ರಾಮಪ್ಪನು ಹೆಂಡತಿಯನ್ನು ಕರೆದುಕೊಂಡು ಮಾವನ ಮನೆಗೆ ಹೋದನು. ಹಬ್ಬ ಮುಗಿದು ನಾಲ್ಕು ದಿನಗಳವರೆಗೆ ಅಲ್ಲಿದ್ದು. ಆ ಮೇಲೆ ಹೆಂಡತಿಯೊಂದಿಗೆ ಹಿಂದಿರುಗಿ ಮನೆಗೆ ಬಂದನು.

ಮಗನ ಕೈಯಲ್ಲಿ ಹಬ್ಬದ ಉಂಗುರವಿರುವುದನ್ನು ನೋಡಿ ಶಾರದಮ್ಮನಿಗೆ ತುಂಬಾ ಸಂತೋಷವಾಯಿತು. ಚೆನ್ನಾಗಿದೆ ಎಂದು ಹೇಳಿ ಆ ಉಂಗುರವನ್ನು ಬಾಯಿತುಂಬಾ ಮೆಚ್ಚಿಕೊಂಡಳು. ಇದಾಗಿ ಕೆಲವು ದಿನಗಳು ಕಳೆದ ಮೇಲೆ ಒಂದು ದಿನ

ಕೆ. ಎಸ್. ಚಂದ್ರ

ಶಾರದಮ್ಮ ಗಾಬರಿಯಿಂದ ರಾಮಪ್ಪನೊಂದಿಗೆ, "ಮಗನೇ, ಅಟ್ಟದ ಮೇಲಿರುವ ಪೆಟ್ಟಿಗೆಯಲ್ಲಿ ಸಾವಿರ ರೂಪಾಯಿ ಇಟ್ಟಿದ್ದೆ. ಅದೀಗ ಕಾಣುವುದಿಲ್ಲ. ನಾನಂತೂ ತೆಗೆದಿಲ್ಲ. ನೀನೇನಾದರೂ ನೋಡಿದೆಯಾ?" ಎಂದು ಕೇಳಿದಳು.

ರಾಮಪ್ಪನ ಮದುವೆಯ ಸಮಯದಲ್ಲಿ ಸಿಕ್ಕಿದ್ದ ವರದಕ್ಷಿಣೆಯಿಂದ ಸಾವಿರ ರೂಪಾಯಿ ತೆಗೆದು ಆ ಪೆಟ್ಟಿಗೆಯಲ್ಲಿಟ್ಟಿದ್ದಳು ಶಾರದಮ್ಮ. ಅದೀಗ ಮಾಯವಾಗಿ ಹೋಗಿತ್ತು.

"ಹೌದೌದು ನಾನೇ ತೆಗೆದೆ. ನಾನು ಹಬ್ಬಕ್ಕೆ ಮಾವಯ್ಯನ ಮನೆಗೆ ಹೋಗುವಾಗ ಆ ಸಾವಿರ ರೂಪಾಯಿಯನ್ನು ತೆಗೆದುಕೊಂಡು ಹೋದೆ. ಮಾವಯ್ಯ ತುಂಬಾ ಸೋತು ಹೋಗಿದ್ದಾರೆಂದು ಮೊದಲೇ ಹೇಳಿದ್ದೆನಲ್ಲ? ನೀನೇನೋ ನನ್ನ ಕೈಯಲ್ಲಿ ಜೋಡುಂಗರ ನೋಡಬೇಕೆಂದು ಆಸೆ ಪಟ್ಟಿರುವಿ. ನಾನು ಹೇಳಿದಂತೆಯೇ ಇತ್ತು ಅಲ್ಲಿನ ಪರಿಸ್ಥಿತಿ. ಅವರು ಕಾಸಿಲ್ಲದೆ ಪರದಾಡಿಕೊಂಡಿದ್ದಾರೆ. ಆದ್ದರಿಂದ ಅವರನ್ನು ಕೇಳದೆ ನಮ್ಮ ಹಣದಿಂದಲೇ ಉಂಗುರ ಮಾಡಿಸಿ ಹಾಕಿಸಿಕೊಂಡು ಬಂದೆ, ನಿನ್ನ ಆಸೆ ತೀರಿಸಲಿಕ್ಕಾಗಿಯೇ ಅಮ್ಮಾ!" ಎಂದನು ರಾಮಪ್ಪ.

ಶಾರದಮ್ಮ ಬೆರಗಾಗಿ, "ಎಂಥ ಕೆಲಸ ನಿನ್ನದು? ನನ್ನ ಹಣದಿಂದ ಉಂಗುರ ಮಾಡಿಸಿಕೊಳ್ಳಲು ನಿನಗೆ ಹೇಗೆ ಮನಸ್ಸು ಬಂತೋ?" ಎಂದು ಚೀರಿದಳು.

"ನೀನೇ ಹೇಳಿದೆಯಲ್ಲಾಮ್ಮಾ? ತಾಯಿಯ ಆಸೆ ತೀರಿಸ ಬೇಕಾದ್ದು ಮಗನ ಕರ್ತವ್ಯ ಅಂತ?" ಎಂದನು ರಾಮಪ್ಪ.

"ಆಯಿತು. ಹಾಗೇ ಅಂದುಕೊಳ್ಳುತ್ತೇನೆ. ನನ್ನ ಆಸೆ ತೀರಿತು ಬಿಡು. ಈಗ ಆ ಉಂಗುರವನ್ನು ಮತ್ತೆ ಮಾರಿ ಆ ಹಣ ತಂದು ನನಗೆ ಕೊಟ್ಟು ಬಿಡು" ಎಂದಳು ಶಾರದಮ್ಮ.

"ಇನ್ನೂ ಆ ಉಂಗುರ ನನ್ನ ಹತ್ತಿರ ಇದೆ ಎಂದು ಕೊಂಡೆಯಾ ಅಮ್ಮಾ? ನಿನ್ನ ಸೊಸೆ ಪಟ್ಟೇ ಸೀರೆ ಬೇಕು ಅಂತ ತುಂಬಾ ಆಸೆ ಪಟ್ಟಳು. ಆ ಉಂಗುರ ಮಾರಿ ಜರಿಯ ಪಟ್ಟೇ ಸೀರೆ ತಂದು ಅವಳಿಗೆ ಕೊಟ್ಟೆನಮ್ಮಾ? ಒಳ್ಳೇ ಸಮಯದಲ್ಲಿ ನಿನಗೆ ತೋರಿಸುತ್ತಾಳಂತೆ!" ಎಂದನು ರಾಮಪ್ಪ.

"ಎಂಥಾ ಕೆಲಸ ಮಾಡಿದಿಯೋ ಮೂರ್ಖಾ!" ಎಂದು ಮತ್ತೆ ಚೀರಿಬಿದ್ದಳು ಶಾರದಮ್ಮ.

"ನೀನೇ ಹೇಳಿದಿಯಲ್ಲಮ್ಮಾ? ಹೆಂಡತಿಯ ಕೋರಿಕೆ ತೀರಿಸಬೇಕಾದ್ದು ಗಂಡನ ಕರ್ತವ್ಯ ಅಂತ. ಈಗ ನಾನೇನು ತಪ್ಪು ಮಾಡಿದೇ ಅಂತ ರೇಗಾಡ್ತೀ ಅಮ್ಮಾ?" ಎಂದನು ರಾಮಪ್ಪ.

ಏನು ಹೇಳ ಬೇಕೆಂದು ಶಾರದಮ್ಮ ಎಷ್ಟು ತಲೆ ಹೊಡೆದುಕೊಂಡರೂ ಗೊತ್ತಾಗಲಿಲ್ಲ.





# ದೇವೀಭಾಗವತ

ಸಾಕ್ಷಾತ್ ತನ್ನ ಪತಿಯಿಂದಲೇ ಶಾಪಕ್ಕೊಳಗಾಗಿ ಹೆಣ್ಣು ಕುದುರೆಯ ರೂಪತಾಳಿದ ಲಕ್ಷ್ಮಿ ಶಿವನ ಅನುಸಂಧಾನದಿಂದ ವಿಷ್ಣುವಿನ ಅನುಗ್ರಹಕ್ಕೆ ಪಾತ್ರಳಾಗಿ ಗಂಡು ಮಗುವನ್ನು ಹೆತ್ತು ಮಗುವನ್ನು ನದೀತೀರದ ಅರಣ್ಯದಲ್ಲಿ ಬಿಟ್ಟು ವೈಕುಂಠಕ್ಕೆ ಹೋದ ಮೇಲೆ, ವಿಷ್ಣು ಹೇಳಿದಂತೆ ಕೂಡಲೇ ನಡೆಯುತೊಡಗಿತು. ಲಕ್ಷ್ಮೀನಾರಾಯಣರು ಹೋದ ಸ್ವಲ್ಪ ಹೊತ್ತಿಗೆಲ್ಲಾ ಚಂಪಕನೆಂಬ ವಿದ್ಯಾಧರನು ಮದಾಲಸೆ ಎಂಬ ತನ್ನ ಹೆಂಡತಿ ಯೊಂದಿಗೆ ಆ ದಾರಿಯಾಗಿ ಬಂದು, ಅಸಾಧಾರಣ ವಾದ ತೇಜಸ್ಸಿನಿಂದ ಬೆಳಗುವ ಆ ಶಿಶುವನ್ನು ನೋಡಿ, ವಿಮಾನದಿಂದ ಇಳಿದು ಆ ಮಗುವನ್ನು ಎತ್ತಿ ಮದಾಲಸೆಯ ಕೈಗೆ ಕೊಟ್ಟನು. ಅವಳು ಅತ್ಯಾನಂದದಿಂದ ಆ ಮಗುವಿನ ನೆತ್ತಿಯನ್ನು ಮೂಸಿ, ಎದೆಗೊತ್ತಿಕೊಂಡು ತನ್ನ ಗಂಡನೊಂದಿಗೆ "ಇದು ಸಾಮಾನ್ಯರ ಶಿಶುವಿನಂತಿಲ್ಲ. ಯಾರ ಮಗು ? ಹೇಗೆ ಸಿಕ್ಕಿದ ? ಹೆತ್ತವಳು ಅರಣ್ಯದಲ್ಲಿ ಬಿಟ್ಟುಹೋದಳೇಕೆ ? ಅವಳಿಗೆ ಮನಸ್ಸಾದರೂ ಹೇಗೆ ಬಂತು ? " ಎಂದಳು.

"ಈ ಮಗುವಿನ ಸಮಾಚಾರ ಸಾವಿರ ಕಣ್ಣುಗಳ ಇಂದ್ರನನ್ನು ಕೇಳಿದರೆ ಗೊತ್ತಾಗುತ್ತದೆ. ಅವನು ಅನುಮತಿ ಕೊಟ್ಟರೆ ನಾವು ಇವನನ್ನು ಬೆಳೆಸೋಣ" ಎಂದು ಹೆಂಡತಿಗೆ ಹೇಳಿ ಚಂಪಕನು ಇಂದ್ರನ ಬಳಿಗೆ ಹೋದನು.

ಅವನು ಇಂದ್ರನಿಗೆ ಆ ಮಗುವನ್ನು ತೋರಿಸಿ, "ಇದು ಯಾರ ಮಗುವೋ ಗೊತ್ತಾಗಲಿಲ್ಲ. ತಮಸಾ ನದಿಯ ತೀರದಲ್ಲಿ ಅನಾಥವಾಗಿ ಮಲಗಿತ್ತು. ಯಾರೋ ಇವನನ್ನು ಹಡೆದು ಅಲ್ಲಿ ಬಿಸುಟುಹೋದರೆಂದು ಕಾಣುತ್ತದೆ. ನಿಮ್ಮ ಅನುಮತಿಯಾದರೆ ಇವನನ್ನು ಬೆಳೆಸಿಕೊಳ್ಳ ಬೇಕೆಂದಿದ್ದೇನೆ. ಅಪ್ಪಣೆಯೆ ? " ಎಂದು ಕೇಳಿದನು.

ಇಂದ್ರನು ಚಂಪಕನನ್ನು ನೋಡಿ, "ಇವನು ನಿನ್ನ ಮನೆಯಲ್ಲಿ ಬೆಳೆಯತಕ್ಕವನಲ್ಲ. ಲಕ್ಷ್ಮೀ ನಾರಾಯಣರು ಕುದುರೆಯ ರೂಪದಲ್ಲಿರುವಾಗ

೨೧. ಹೈಹಯನ ಕಥೆ




ಜನ್ಮವೆತ್ತಿದವನು ಇವನು. ಹೈಹಯನೆಂಬ ಹೆಸರಿನಿಂದಿರುವ ಈ ಮಗುವನ್ನು ಯಯಾತಿಯ ಮಗನಾದ ತುರ್ವಸುವಿಗಾಗಿ ವಿಷ್ಣು ಅಲ್ಲಿ ಇರಿಸಿದ್ದಾನೆ. ವಿಷ್ಣುವಿನ ಪ್ರೇರಣೆಯಿಂದ ಇನ್ನು ಸ್ವಲ್ಪ ಹೊತ್ತಿಗೆ ತುರ್ವಸು ಅಲ್ಲಿಗೆ ಬರುತ್ತಾನೆ. ಆದುದರಿಂದ ನೀನು ಈ ಕಂದನನ್ನು ಬೇಗನೇ ಅಲ್ಲಿಬಿಟ್ಟು ಹೋಗಿಬಿಡು. ಇವನಿಗೆ ಏಕವೀರನೆಂಬ ಹೆಸರು ಬರುತ್ತದೆ" ಎಂದನು.

ಇಂದ್ರನ ಮಾತು ಕೇಳಿ ಚಂಪಕನು ಕೂಡಲೇ ಆ ಶಿಶುವನ್ನು ಎತ್ತಿಕೊಂಡು ಹೋಗಿ, ಎಲ್ಲಿ ದೊರಕಿದನೋ ಅಲ್ಲಿಯೇ ಇಟ್ಟು ತನ್ನ ದಾರಿ ಹಿಡಿದು ಹೊರಟುಹೋದನು.

ಈ ನಡುವೆ ವಿಷ್ಣು ಯಯಾತಿಯ ಮಗನಾದ ತುರ್ವಸುವಿನ ಮುಂದೆ ಪ್ರತ್ಯಕ್ಷನಾದನು. ಎಂತೆಂತಹ ದೊಡ್ಡ ಪುಣ್ಯಾತ್ಮರಿಗೆ ಕೂಡಾ ದರ್ಶನ ದೊರೆಯದ ವಿಷ್ಣುಮೂರ್ತಿಯ ದಿವ್ಯದರ್ಶನವು ತನಗಾದುದನ್ನು ನೋಡಿ, ತುರ್ವಸುವಿಗಾದ ಆನಂದಕ್ಕೆ ಪಾರವಿಲ್ಲದೆ ಹೋಯಿತು. ಇದಿರಿನಲ್ಲಿ ನಿಂತ ತನ್ನ ಆರಾಧ್ಯದೇವನನ್ನು ಬಗೆಬಗೆಯಾಗಿ ಸ್ತುತಿಸಿದನು. "ಏನು ನಿನ್ನ ಕೋರಿಕೆ?" ಎಂದು ವಿಷ್ಣು ಅವನನ್ನು ಕೇಳಿದನು.

"ಒಬ್ಬ ಪುತ್ರನನ್ನು ಕರುಣಿಸು ದೇವಾ" ಎಂದನು ತುರ್ವಸು.

"ಅಕೋ ನೋಡು. ನಿನಗಾಗಿಯೇ ನಾನೂ ಲಕ್ಷ್ಮಿಯೂ ಒಬ್ಬ ಪುತ್ರನನ್ನು ಪಡೆದಿದ್ದೇವೆ. ಅವನು ತಮಸಾ ಕಾಳಿಂದೀ ನದಿಗಳ ಸಂಗಮದ ಹತ್ತಿರ ಇದ್ದಾನೆ. ಹೋಗಿ ತಂದು ಬೆಳೆಸಿಕೋ" ಎಂದು ಹೇಳಿ ವಿಷ್ಣು ಮಾಯವಾದನು.

ತುರ್ವಸು ಅತ್ಯಾನಂದದಿಂದ ವಿಷ್ಣು ಹೇಳಿದ ಗುರುತಿನ ಸ್ಥಳಕ್ಕೆ ಹೋದನು. ಅಲ್ಲಿ ಹಸುರು ಹುಲ್ಲು ಚಿಗುರುಗಳ ಮೇಲೆ ಮಲಗಿ, ನಗುಮೊಗದಿಂದ ಕಾಲಿನ ಹೆಬ್ಬೆರಳನ್ನು ಬಾಯಿಗಿಟ್ಟುಕೊಂಡು ಆಡಿಕೊಂಡಿರುವ ಮಗುವನ್ನು. ನೋಡಿ, ಅದರ ಅಂದ ಚೆಂದಗಳಿಗೆ ಆಶ್ಚರ್ಯಪಡುತ್ತಾ, ಬಾಚಿ ತನ್ನ ಕೈಯಲ್ಲಿ ಎತ್ತಿಕೊಂಡು, "ಹೇ! ವಿಷ್ಣು ಪ್ರಸಾದರೂಪನೇ! ನನ್ನ ಮುದ್ದು ಕಂದಾ! ವಿಷ್ಣುಮೂರ್ತಿಯನ್ನು ತಪಸ್ಸಿನಿಂದ ಮೆಚ್ಚಿಸಿ ನಿನ್ನನ್ನು ಪಡೆದೆ. ನೀನೇ ಇನ್ನು ನನ್ನ ವಂಶವನ್ನು ನಿಲ್ಲಿಸು!" ಎಂದು ಮುದ್ದಿಸಿ ಆನಂದೋತ್ಸಾಹದಲ್ಲಿ ಮುಳುಗಿ ತೇಲುತ್ತ, ತನ್ನ ನಗರಕ್ಕೆ ಹೋದನು.

ಆಮೇಲೆ ರಾಜಭವನವೆಲ್ಲಾ ಉತ್ಸವದ ಸಂಭ್ರಮಗಳಿಂದ ತುಂಬಿಹೋಯಿತು. ಹರಿವರ್ಮನೆಂಬ ನಾಮಾಂತರವುಳ್ಳ ತುರ್ವಸು ರಾಜನು, ತನ್ನ ಕೈಯಲ್ಲಿರುವ ಶಿಶುವನ್ನು ಹೆಂಡತಿಯ ಕೈಗೆ ಕೊಟ್ಟು ಅದು ತನಗೆ ಸಿಕ್ಕಿದ ರೀತಿಯನ್ನೆಲ್ಲಾ ಅವಳಿಗೆ ಹೇಳಿದನು. ಆಮೇಲೆ ಬಹು ವೈಭವದಿಂದ ನಾಮಕರಣ ಮಹೋತ್ಸವವು ನಡೆಯಿತು.



"ಏಕವೀರ" ಎಂದು ಹೆಸರಿಟ್ಟರು. ಅವನು ದಿನದಿಂದ ದಿನಕ್ಕೆ ಬೆಳೆಯುತ್ತಿರಲು, ಆರನೇ ತಿಂಗಳಿನಲ್ಲಿ ಅನ್ನಪ್ರಾಶನ ನಡೆಯಿತು. ಮೂರು ವರ್ಷ ತುಂಬಲು ಚೌಲ ನೆರವೇರಿತು. ಹನ್ನೊಂದ ನೆಯ ವಯಸ್ಸಿನಲ್ಲಿ ಉಪನಯನವಾಗಿ ವೇದ ಧನುರ್ವೇದಗಳ ಅಭ್ಯಾಸಕ್ಕೆ ತೊಡಗಿದನು.

ಅವನಿಗೆ ಎಳೆ ಮೀಸೆ ಮೂಡಿ ಯುಕ್ತವಯಸ್ಸು ಬಂದ ಕೂಡಲೇ ಹರಿವರ್ಮ ತುರ್ವಸು ಅವನಿಗೆ ಪಟ್ಟಾಭಿಷೇಕವನ್ನು ಮಾಡಿ, ತಾನು ಹೆಂಡತಿ ಯೊಂದಿಗೆ ವಾನಪ್ರಸ್ಥವನ್ನು ಸ್ವೀಕರಿಸಿ ಅರಣ್ಯಕ್ಕೆ ಹೋಗಿ ಪಾರ್ವತಿಯನ್ನು ಕುರಿತು ತಪಸ್ಸು ಮಾಡಲು ತೊಡಗಿದನು. ಮುಂದೆ ಕಾಲಕ್ರಮದಲ್ಲಿ ಆ ರಾಜದಂಪತಿಗಳು ಒಟ್ಟಿಗೇ ಸ್ವರ್ಗಸ್ಥರಾದರು. ಈ ಸಮಾಚಾರವು ಏಕವೀರನಿಗೆ ಗೊತ್ತಾಯಿತು. ಅವನು ಅವರಿಗೆ ಶಾಸ್ತ್ರೀಯವಾಗಿ ಉತ್ತರಕ್ರಿಯೆ ಗಳನ್ನು ಮಾಡಿದನು.

ಒಂದಾನೊಂದು ದಿನ ಏಕವೀರನು ತನ್ನ ಪರಿವಾರವನ್ನು ಕರೆದುಕೊಂಡು ಗಂಗಾತೀರದಲ್ಲಿ ವಿಹರಿಸಲು ಹೊರಟನು. ಅಲ್ಲಿ ಋಷಿಗಳ ಆಶ್ರಮ ಗಳು ಸುಂದರವಾದ ಗಿಡಮರ ಬಳ್ಳಿಗಳಿಂದಲೂ, ಬಗೆಬಗೆಯ ಪಕ್ಷಿಗಳ ಕಲಕಲರವಗಳಿಂದಲೂ, ಮನೋರಂಜಕವಾಗಿದ್ದುವು. ಅಲ್ಲಿಯ ಪ್ರಕೃತಿ ಸೌಂದರ್ಯವನ್ನು ನೋಡಿ ಸಂತೋಷಿಸುತ್ತ ನದೀ ತೀರದಲ್ಲಿ ನಡೆಯುತ್ತಿದ್ದಾಗ ಒಂದು ವಿಚಿತ್ರ ದೃಶ್ಯವು ಅವನನ್ನು ಚಕಿತಗೊಳಿಸಿತು. ಸ್ತ್ರೀ ಯೊಬ್ಬಳು, ಅಕ್ಕಪಕ್ಕದಲ್ಲಿ ಯಾರೂ ಇಲ್ಲದೆ ಕೇವಲ ಏಕಾಂಗಿಯಾಗಿ ಏನೋ ಚಿಂತಿಸಿಕೊಂಡಿರುವಂತೆ ಕಾಣುತ್ತಿತ್ತು. ಆ ಪ್ರಾಂತದಲ್ಲಿ ಗಂಗಾನದಿ ಒಂದು ಕೊಳವನ್ನುಂಟುಮಾಡಿತ್ತು. ಆ ಗಂಗಾ ಸರೋವರ ದಲ್ಲಿ ನೂರು ದಳಗಳಿರುವ ಒಂದು ಪದ್ಮಪುಷ್ಪವು ಕಾಣುತ್ತಿತ್ತು. ಆ ಪದ್ಮದ ದಕ್ಷಿಣ ದಿಕ್ಕಿನ ತೀರದಲ್ಲಿ ಅದನ್ನು ನೋಡುತ್ತಾ ಅವಳು ನಿಂತಿದ್ದಳು. ಏಕವೀರನು ಅವಳ ಬಳಿಗೆ ಹೋಗಿ, "ಯಾರು ನೀನು ? ಏನೋ ಚಿಂತೆಯಲ್ಲಿರುವಿಯಲ್ಲಾ ? ನೀನು ಮಾನವಿಯೋ ? ದೇವತೆಯೋ ? ಏನು ನಿನ್ನ ಹೆಸರು ? ಯಾರು ನಿನ್ನ ತಂದೆ ? ಈ ನಿರ್ಜನ ಪ್ರದೇಶದಲ್ಲಿ ನಿನ್ನನ್ನು ಬಿಟ್ಟುಹೋದವರಾರು ? ಯಾರು ನಿನ್ನ ಗಂಡ ? ನಿನ್ನ ದುಃಖಕ್ಕೆ ಕಾರಣವೇ ನೆಂದು ಹೇಳಿದರೆ ಅದನ್ನು ನಿವಾರಿಸಲು ನಾನು ಪ್ರಯತ್ನಪಡುತ್ತೇನೆ. ನಿನ್ನ ದುಃಖಕ್ಕೆ ಕಾರಣ ರಾದವರು ಮಾನವರಾದರೂ, ದಾನವರಾದರೂ, ದೇವತೆಗಳೇ ಆದರೂ ನಾನು ನೋಡಿಕೊಳ್ಳುತ್ತೇನೆ. ನಿಃಶಂಕೆಯಿಂದ ಹೇಳು" ಎಂದನು. ಅವಳು ಹೀಗೆ ಹೇಳಲು ತೊಡಗಿದಳು :

"ಯಾವುದೋ ಒಂದು ಕಾರಣವಿಲ್ಲದೆ ಯಾರಿಗೂ ಏನೂ ಆಗದು. ಏನೋ ಒಂದು ಕಷ್ಟವು ಬಾರದೆ ಯಾರಿಗೂ ದುಃಖವು ಬಾರದು. ನಿನ್ನ ದೇಶವೇ



ಗಂಡುಮಗನ ಹಾಗೆಯೇ ಬೆಳೆಯಿಸಿಕೋ. ಇವಳೇ ನಿನಗೆ ವಿಷ್ಣುಕೊಟ್ಟ ಪ್ರಸಾದ !' ಎಂದನು.

ಆಮಾತು ಕೇಳಿ ರಭ್ಯನು ತುಂಬಾ ಸಂತೋಷ ಪಟ್ಟು ಆ ಬಾಲೆಯನ್ನು ತನ್ನ ಹೆಂಡತಿಯಾದ ರುಕ್ಮರೇಖೆಗೆ ಒಪ್ಪಿಸಿದನು. ಅವಳು ಕೂಡಾ ತಾನು ಸ್ವತಃ ಮಗನನ್ನು ಹಡೆದೆನೆಂಬಷ್ಟು ಸಂತೋಷ ಪಟ್ಟಳು. ಅವರ ಪೋಷಣೆಯಲ್ಲಿ ಆ ಬಾಲೆ ಅವರ ಮಗನ ಹಾಗೆಯೇ ಬೆಳೆಯುತ್ತಾ ಬಂದಳು. ಆ ರಾಜನ ಮಂತ್ರಿಗೆ ಒಬ್ಬಳು ಮಗಳಿದ್ದಾಳೆ. ಅವಳೇ ನಾನು. ನನ್ನ ಹೆಸರು ಯಶೋವತಿ. ನಾವಿಬ್ಬರೂ ಒಂದೇ ವಯಸ್ಸಿನವರಾದುದರಿಂದ ರಾಜನು ನನ್ನನ್ನು ತನ್ನ ಮಗಳಿಗೆ ಪ್ರಿಯ ಸಖಿಯಾಗಿ ಇರಿಸಿದನು. ನಾವಿಬ್ಬರೂ ತುಂಬಾ ಪ್ರೇಮದಿಂದ ಪ್ರತಿಯೊಂದರಲ್ಲಿ ಕೂಡಿಯೇ ಇರುವೆವು. ರಾಜ ಕುಮಾರಿ ಏಕಾವಳಿಗೆ ಪದ್ಮಪುಷ್ಪಗಳೆಂದರೆ ತುಂಬಾ ಇಷ್ಟ. ಆದುದರಿಂದ ಅವಳು ದಿನಾ ನನ್ನನ್ನೂ ಇತರ ಗೆಳತಿಯರನ್ನೂ ಕರೆದುಕೊಂಡು ಗಂಗಾನದಿ ಕೊಳಕಟ್ಟಿಕೊಂಡಿರುವ ಕಮಲ ಸರೋವರಗಳಿಗೆ ಹೋಗುವಳು. ಪದ್ಮಗಳಿರುವ ಗಂಗಾ ಸರೋವರ ಗಳಲ್ಲಿ ಜಲಕ್ರೀಡೆಯಾಡುವಳು. ಗಂಗಾನದಿಯಲ್ಲಿ ಈಜುತ್ತಾ ಅಕ್ಕಪಕ್ಕದ ಸರೋವರಗಳಿಗೆ ಹೋಗುವಳು. ಅಷ್ಟು ದೂರ ಹೋಗಬಾರದೆಂದು ನಾನು ಎಷ್ಟು ಹೇಳಿದರೂ ಕೇಳುತ್ತಿದ್ದಿಲ್ಲ. ಆದುದ ರಿಂದ ನಾನು ಅವಳಿಗಿರುವ ಈ ಪದ್ಮ ಮೋಹ ವನ್ನು ಕುರಿತು ಅವಳ ತಂದೆಗೆ ಹೇಳಿದೆನು. ಆಗ ರಭ್ಯ ಮಹಾರಾಜನು ತನ್ನ ನಗರದೊಳಗೆ ಕಮಲ ಪುಷ್ಪಗಳಿರುವ ಅನೇಕ ಸರೋವರಗಳನ್ನು ನಿರ್ಮಿಸಿ ತನ್ನ ಕುಮಾರಿಯೊಂದಿಗೆ 'ಅಮ್ಮಾ ನಿನಗೆ ಪದ್ಮ ಜಲದಲ್ಲಿ ಕ್ರೀಡಿಸಬೇಕೆಂದು ತೋರಿದರೆ ಇವುಗಳ ಲ್ಲಿಯೇ ನೀರಾಡಿಕೊಂಡಿರು. ಮತ್ತೆಲ್ಲಿಗೂ ಹೋಗ ಬೇಡ' ಎಂದನು.

ಅಲ್ಲದ ಒಂದು ದೇಶವಿದೆ. ಅದಕ್ಕೆ ರಭ್ಯನೆಂಬವನು ರಾಜ. ಅವನು ತುಂಬಾ ಪುಣ್ಯಾತ್ಮನಾದ ರಾಜ. ರುಕ್ಮರೇಖೆ ಎಂಬವಳು ಅವನ ಹೆಂಡತಿ. ಆ ರಾಜ ದಂಪತಿಗಳಿಗೆ ಸಂತಾನವಿಲ್ಲದೆಯೇ ಕಾಲ ಕಳೆಯು ತ್ತಿದ್ದಿತು. ಅವಳು ಗಂಡನೊಂದಿಗೆ, 'ಮಕ್ಕಳಿಲ್ಲದ ಬಾಳುವೆಗಿಂತ ಹೀನವಾದುದು ಹೆಂಗುಸಿಗೆ ಬೇರೊಂದಿಲ್ಲವಷ್ಟೇ' ಎಂದು ಗಳಗಳ ಅತ್ತಳು. ಆಗ ಆ ರಾಜನು ಬ್ರಾಹ್ಮಣರನ್ನು ನಿಯೋಜಿಸಿ ಸಂತಾನಕ್ಕಾಗಿಯೇ ಒಂದು ಯಜ್ಞ ಮಾಡಿಸಿದನು. ಆ ಯಜ್ಞದ ಅಗ್ನಿಕುಂಡದಿಂದ ಬಂಗಾರದ ಬೊಂಬೆ ಯಂತಹ ಹೆಣ್ಣು ಮಗುವೊಂದು ಹುಟ್ಟಿ ಬಂದಳು. ಯಜ್ಞದ ಹೋತಾರನಾದ ಮುಖ್ಯ ಪುರೋಹಿತನು ರಾಜನಿಗೆ ಅವಳನ್ನು ತೋರಿಸುತ್ತ 'ಈ ಬಾಲೆ ಏಕಾವಳಿ ಹಾರದೊಂದಿಗೆ ಹುಟ್ಟಿದ್ದಾಳೆ. ಅಗ್ನಿಪುತ್ರಿ ಯಾದ ಇವಳಿಗೆ ಏಕಾವಳಿ ಎಂತಲೇ ಹೆಸರು. ಇಂದಿನಿಂದ ಇವಳನ್ನು ಪುತ್ರನೆಂದೇ ತಿಳಿದು,

ಆದರೆ ಅವಳು ದೂರ ಪ್ರದೇಶಗಳಿಗೆ ಹೋಗುವುದನ್ನು ಬಿಡಲೇ ಇಲ್ಲ. ಆದುದರಿಂದ ರಾಜನು ಅವಳಿಗಾಗಿ ಆಯುಧಪಾಣಿಗಳಾದ ಭಟರ ರಕ್ಷಣೆಯ ಏರ್ಪಾಡು ಮಾಡಿದನು. ಅವಳು ದಿನಾ ತಂದೆಯೊಡನೆ ಹೇಳಿ, ನನ್ನನ್ನೂ ಇತರ ಗೆಳತಿಯರನ್ನೂ ಕರೆದುಕೊಂಡು ಗಂಗಾನದಿಗೆ ಬರುವಳು. ಹೀಗೆಯೇ ಒಂದುದಿನ ಬೆಳಿಗ್ಗೆ ಎಂದಿನಂತೆ ರಾಜಕುಮಾರಿಯೂ ನಾವೂ ಇಲ್ಲಿಗೆ ಬಂದೆವು. ಆಗ ಇಲ್ಲಿ ನಮಗಿಂತ ಮೊದಲೇ ರತೀದೇವಿ ಅಪ್ಸರಸಿಯರೊಂದಿಗೆ ಜಲಕ್ರೀಡೆಯಾಡಿಕೊಂಡಿದ್ದಳು. ನನ್ನ ಸಖಿ ಅವರೊಂದಿಗೆ ಕೂಡಿ ಆಡತೊಡಗಿದಳು.

ಆ ಸಮಯದಲ್ಲಿ ಕಾಲಕೇತು ಎಂಬ ಕೆಟ್ಟ ರಾಕ್ಷಸನು, ರಾಕ್ಷಸ ಪರಿವಾರದೊಂದಿಗೆ ಈ ದಾರಿಯಾಗಿ ಬಂದು, ನನ್ನ ಸಖಿಯಾದ ಏಕಾವಳಿಯ ಸೌಂದರ್ಯಾತಿಶಯವನ್ನು ನೋಡಿ, ಅವಳನ್ನು ಎತ್ತಿಕೊಂಡು ಹೋಗುವ ಉದ್ದೇಶದಿಂದ ಸಮೀಪಿಸಿದನು. ನಾನೇ ಮೊದಲು ಆ ರಾಕ್ಷಸನನ್ನು ನೋಡಿ 'ರಾಕ್ಷಸ ! ರಾಕ್ಷಸ !' ಎಂದು ಗಟ್ಟಿಯಾಗಿ ಕೂಗಿದೆ. ಆಗ ಸಖಿ ಏಕಾವಳಿ ತಿರುಗಿ ನೋಡಿ ಹೆದರಿ ಓಡುತ್ತಾ ಬಂದು ನಮ್ಮ ಎಲ್ಲಾ ಗೆಳತಿಯರ ಗುಂಪಿನೊಳಗೆ ತೂರಿಕೊಂಡಳು. ರಾಜಭಟರು ರಾಕ್ಷಸನನ್ನು ಇದಿರಿಸಿದರು. ರಾಕ್ಷಸನು ತನ್ನ ಗದೆಯಿಂದ ರಾಜಭಟರನ್ನೆಲ್ಲ ಹೊಡೆದೋಡಿಸಿ, ಜಗನ್ಮೋಹಿನಿಯಾದ ನನ್ನ ಸಖಿ ಏಕಾವಳಿಯನ್ನು ಎತ್ತಿಕೊಂಡು ಹೊರಟೇ ಬಿಟ್ಟನು. ನನ್ನ ಸಖಿ ಭೀತಿಯಿಂದ ರೋದಿಸತೊಡಗಿದಳು. ನಾನು ಏನೂ ತೋರದವಳಾಗಿ ಆ ರಾಕ್ಷಸನೊಂದಿಗೆ 'ಅವಳನ್ನು ಬಿಟ್ಟುಬಿಡು, ನನ್ನನ್ನು ಎತ್ತಿಕೊಂಡು ಹೋಗು' ಎಂದು ಮೊರೆಯಿಡುತ್ತಾ ಹಿಂದೆಯೇ ಹೋದೆ. ಅವನು ನನ್ನ ಮಾತನ್ನು ಕೇಳದೆ ಅವಳನ್ನು ಹೊತ್ತುಕೊಂಡು ಹೋಗುತ್ತಲೇ ಇದ್ದ. ನಾನು ಕೂಡಾ ಅವನ ಹಿಂದೆಯೇ ಹೋದೆ. ನನ್ನನ್ನು ನೋಡಿ ಏಕಾವಳಿ ಸ್ವಲ್ಪ ಸಮಾಧಾನಪಟ್ಟುಕೊಂಡಳು. ಅವಳು ನನ್ನನ್ನು ಕರೆದು ಆಲಿಂಗಿಸಿ





ಅವಳೇ ಅಧಿಕಾರಿಣಿ ಎಂದು ಹೇಳು. ನಾನು ಅವಳಿಗೆ ಸೇವಕನಾಗಿದ್ದು ಅವಳೇನು ಹೇಳಿದರೂ ಕೇಳುತ್ತೇನೆನ್ನು. ಏನು ಕೇಳಿದರೂ ಕೊಡುತ್ತೇನೆನ್ನು ' ಎಂದನು.

ಅದಕ್ಕೆ ನಾನು 'ಮಹಾರಾಕ್ಷಸಾ. ನೀನು ಹೇಳಿದಂತೆ ನಡೆಸುವ ಸಾಮರ್ಥ್ಯ ನನಗಂತೂ ಇಲ್ಲ. ನೀನೇ ಅವಳೊಂದಿಗೆ ಮಾತಾಡಿಕೋ' ಎಂದು ಹೇಳಿದೆ. ಕಾಲಕೇತು ನನ್ನ ಸಖಿಯನ್ನು ನೋಡಿ, 'ನೋಡು ನಿನ್ನ ಈ ಪರಮದಾಸನನ್ನು. ನನ್ನನ್ನು ಅನುಗ್ರಹಿಸು. ನಿನ್ನ ಯೌವನವು ಶಾಶ್ವತವೇನಲ್ಲ ವಷ್ಟೆ ? ' ಎಂದನು.

ಅದಕ್ಕೆ ನನ್ನ ಸಖಿ, 'ನನ್ನ ತಂದೆ ನನ್ನನ್ನು ಒಬ್ಬ ರಾಜಕುಮಾರನಿಗೆ ಕೊಡಬೇಕೆಂದು ಹೇಳಿಕೊಂಡಿದ್ದಾರೆ. ಅವನ ಹೆಸರು ಹೈಹಯನಂತೆ. ನಾನು ಆತನನ್ನೇ ವರಿಸಿಕೊಂಡವಳು. ಅಂದ ಮೇಲೆ ನಾನು ಇನ್ನೊಬ್ಬನ ಪತ್ನಿಯಾಗಲು ಹೇಗೆ ಸಾಧ್ಯ ? ಕನ್ಯೆಯರು ತಾಯಿತಂದೆಯರು ಎತ್ತಿಕೊಡುವವನನ್ನೇ ಮದುವೆಯಾಗಬೇಕೇ ಹೊರತು ಸ್ವತಂತ್ರಳಾಗಿರಲು ಸಾಧ್ಯವಿಲ್ಲವಷ್ಟೆ ? ಎಂದಳು.

ಆದರೂ ಆ ದುಷ್ಟನು ತನ್ನ ಹಟಬಿಡಲಿಲ್ಲ. ಅವನ ನಗರವು ಪಾತಾಳ ಗರ್ಭದಲ್ಲಿ ರಾಕ್ಷಸರ ಬಲವಾದ ರಕ್ಷಣೆಯಲ್ಲಿ ಇರುವಂಥಾದ್ದು. ಅಲ್ಲಿಗೆ ಹೋಗಲು ಯಾರಿಗೂ ಸಾಧ್ಯವಿಲ್ಲ."

ಯಶೋವತಿ ಹೇಳಿದ ಈ ಸಮಾಚಾರವನ್ನೆಲ್ಲಾ ಕೇಳಿ ಏಕವೀರನು, "ಹೌದು, ಆ ರಾಕ್ಷಸನು ನಿನ್ನನ್ನೂ ನಿನ್ನ ಸಖಿಯನ್ನೂ ಪಾತಾಳದ ನಗರದಲ್ಲಿ ಇರಿಸಿದನೆಂದು ಹೇಳಿದಿಯಲ್ಲಾ ? ನೀನು ಮಾತ್ರ ಇಲ್ಲಿಗೆ ಹೇಗೆ ಬಂದೆ ? ಹೈಹಯನನ್ನು ನಿನ್ನ ಸಖಿ ಪ್ರೇಮಿಸಿದ ಸಮಾಚಾರ ಹೇಳಿದೆ. ನನ್ನ ಹೊರತು ಹೈಹಯನೆಂಬವನು ಪ್ರಪಂಚದಲ್ಲಿ ಇನ್ನೊಬ್ಬನಿಲ್ಲ. ನಿನ್ನ ರಾಜನು ಆ ಹುಡುಗಿಯನ್ನು ನನಗಾಗಿಯೇ

ಕೊಂಡು ಆಳುವುದನ್ನು ನೋಡಿ, ಕಾಲಕೇತು ದೂರದಲ್ಲಿರುವ ತನ್ನ ನಗರದ ವೈಭವಗಳನ್ನು ನನಗೆ ವರ್ಣಿಸುತ್ತ, 'ನೋಡಿದೆಯಾ ! ನನ್ನ ನಗರ ಸ್ವರ್ಗಕ್ಕೆ ಸಮಾನವಾಗಿದೆ. ನೀನು ಇವಳ ಪ್ರಿಯಸಖಿ ನಿಜವಾದರೆ ಇವಳಿಗೆ ಧೈರ್ಯವಾಗುವ ಹಾಗೆ ಹೇಳು. ನಾನು ಇವಳಿಗೆ ದಾಸನಾಗಿರುತ್ತೇನೆ. ನೀವಿಬ್ಬರೂ ಚಿಂತೆಬಿಟ್ಟು ಸಂತೋಷವಾಗಿರಿ' ಎಂದು ನನ್ನೊಂದಿಗೆ ಹೇಳಿ, ನನ್ನನ್ನು ಸಹಾ ಏಕಾವಳಿಯೊಂದಿಗೆ ರಥದಲ್ಲಿ ಕೂಡಿಸಿಕೊಂಡು ವೇಗವಾಗಿ ತನ್ನ ನಗರವನ್ನು ಸೇರಿದನು. ಅಲ್ಲಿ ಒಂದು ಬಿಳೀ ಬಣ್ಣದ ಮನೆ ನಮಗಾಗಿ ಸಿದ್ಧವಾಯಿತು. ಆ ಮನೆಯು ಸುತ್ತಲೂ ಬಿಚ್ಚುಗತ್ತಿಯ ರಾಕ್ಷಸರು ಕಾವಲಿದ್ದರು.

ಮಾರಣೇ ದಿನ ಆ ರಾಕ್ಷಸನು ಅಲ್ಲಿಗೆ ಬಂದು ನನ್ನೊಂದಿಗೆ, 'ಹೇಗಾದರೂ ನಿನ್ನ ಸಖಿ ನನ್ನನ್ನು ಮದುವೆಯಾಗುವಂತೆ ಮಾಡಿಬಿಡು. ನನ್ನ ರಾಜ್ಯಕ್ಕೆ

ಮೀಸಲಿರಿಸಿದ ಹಾಗೆ ಹೇಳುವೆಯಲ್ಲಾ? ಯಾವುದನ್ನೂ ಮುಚ್ಚುಮರೆ ಮಾಡದೆ ಹೇಳು. ಅದೆಲ್ಲಾ ನಿಜವಾದ ಪಕ್ಷದಲ್ಲಿ ಆ ರಾಕ್ಷಸನನ್ನು ಕೊಂದು ನಿನ್ನ ಸಖಿಯನ್ನು ಬಿಡಿಸಿ ತರುತ್ತೇನೆ. ಅಲ್ಲಿಗೆ ಹೋಗುವ ದಾರಿ ಹೇಳು. ಅಸಲು, ತನ್ನ ಮಗಳನ್ನು ರಾಕ್ಷಸನು ಕದ್ದುಕೊಂಡು ಹೋದ ಸಂಗತಿ ಅವಳ ತಂದೆಗೆ ಗೊತ್ತಿದೆಯೇ? ಗೊತ್ತಿದ್ದರೆ ಹುಡುಕುವ ಪ್ರಯತ್ನ ಮಾಡದೆ ಸುಮ್ಮನಿರುತ್ತಾನೆಯೆ? ಆತನು ಅಷ್ಟೊಂದು ಅಸಮರ್ಥನಾದ ರಾಜನೇ?" ಎಂದನು.

ಯಶೋವತಿ ಹೀಗೆಂದಳು: "ನಾನು ಚಿಕ್ಕವಳಾಗಿರುವಾಗ ಒಬ್ಬ ಸಿದ್ಧಪುರುಷನು ನನಗೆ ಒಂದು ಮಂತ್ರವನ್ನು ಉಪದೇಶಿಸಿದನು. ನಾನು ಆ ರಾಕ್ಷಸನ ನಗರದೊಳಗಿರುವಾಗ ಆ ಮಂತ್ರವು ನನ್ನ ನೆನಪಿಗೆ ಬಂದಿತು. ಆ ಮಂತ್ರದಿಂದ ಮಹಾದೇವಿಯನ್ನು ಧ್ಯಾನಿಸಿದರೆ ಒಳಿತಾಗುತ್ತದೆಂದು ತಿಳಿದಿದ್ದುರಿಂದ ಅದನ್ನು ಜಪಿಸಿ ಧ್ಯಾನಮಾಡಿದೆ. ಆಗ ಕೆಂಪಗಿನ ಬಟ್ಟೆಗಳನ್ನು ಧರಿಸಿಕೊಂಡ ಮಹಾದೇವಿ ನನ್ನ ಕನಸಿನಲ್ಲಿ ಕಾಣಿಸಿ, 'ಯಶೋವತೀ, ನೀನು ಕೂಡಲೇ ಎದ್ದು ಗಂಗಾನದಿಯ ತೀರಕ್ಕೆ ಹೋಗು. ನಿನಗೆ ರಾಕ್ಷಸನ ಭಯವೇ ಬೇಡ. ಅಲ್ಲಿಗೆ ನನ್ನ ಭಕ್ತನಾದ ಹೈಹಯನು ಬರುತ್ತಾನೆ. ಅವನು ನಿನ್ನನ್ನು ನೋಡಿ, ರಾಕ್ಷಸನನ್ನು ಕೊಂದು ಏಕಾವಳಿಯನ್ನು ಬಿಡಿಸಿಕೊಳ್ಳುತ್ತಾನೆ. ಆಮೇಲೆ ಅವರಿಬ್ಬರಿಗೆ ಮದುವೆ ಮಾಡಿಸಿಬಿಡು' ಎಂದು ಹೇಳಿ ಅಂತರ್ಧಾನಳಾದಳು.

"ನಾನು ಧ್ಯಾನನಿದ್ರೆಯಿಂದೆದ್ದು ಏಕಾವಳಿಗೆ ಈ ಸಂಗತಿಯನ್ನು ಹೇಳಿದೆ. ಅವಳು ತುಂಬಾ ಸಂತೋಷಪಟ್ಟಳು. ನಾನು ಆ ಪರಾಶಕ್ತಿಯ ದಯದಿಂದ ಹೀಗೆ ಇಲ್ಲಿಗೆ ಬರಲು ಸಾಧ್ಯವಾಯಿತು" ಎಂದಳು.




"ಸರಿ. ನನ್ನ ವಿಷಯ ಹೇಳಿಬಿಡುತ್ತೇನೆ. ಲಕ್ಷ್ಮೀದೇವಿಯೇ ನನ್ನನ್ನು ಹಡೆದ ತಾಯಿ. ಏಕವೀರನೆಂದು ನನ್ನ ಹೆಸರು. ನಿನ್ನ ಸಖಿಯ ಅಂದಚೆಂದಗಳನ್ನು ಕುರಿತು ನಿನ್ನ ಬಾಯಿಯಿಂದ ಕೇಳಿದಾಗಲೇ ನನಗೆ ಅವಳ ಮೇಲೆ ಮೋಹ ಉಂಟಾಯಿತು. ಅವಳು ನನ್ನನ್ನೇ ಪ್ರೇಮಿಸಿರುವಳೆಂದು ತಿಳಿದು ನಾನು ಅವಳ ದಾಸನಾಗಿ ಹೋದೆ. ನಿನ್ನ ಋಣವನ್ನು ಹೇಗೆ ತಾನೇ ತೀರಿಸಲಿ? ಅದಿರಲಿ, ಈ ನಿನ್ನ ಸಖಿ ಇರುವಲ್ಲಿಗೆ ಹೇಗೆ ಹೋಗಲಿ?" ಎಂದು ಕೇಳಿದನು ಏಕವೀರ.

"ರಾಜಾ, ನಿನಗೆ ಆ ದೇವಿಯ ದಿವ್ಯ ಮಂತ್ರವನ್ನು ಉಪದೇಶಿಸುತ್ತೇನೆ. ಅದರ ಸಹಾಯದಿಂದ ರಾಕ್ಷಸ ನಗರಕ್ಕೆ ಹೋಗಿ ಕಾಲಕೇತು ರಾಕ್ಷಸನನ್ನು ಕೊಂದು ರಾಜಕುಮಾರಿಯನ್ನು ಕರೆದುಕೊಂಡು ಬಾ" ಎಂದು ಯಶೋವತಿ "ತ್ರಿಲೋಕ ತಿಲಕ" ಎಂಬ ದಿವ್ಯ ಮಂತ್ರವನ್ನು ಅವನಿಗೆ ಉಪದೇಶ

ಮಾಡಿದಳು. ಅದರ ಸಹಾಯದಿಂದ ಭೂಮಿ ಬಾಯಿ ತೆರೆಯಲು, ಏಕವೀರನು ಯಶೋವತಿಯನ್ನೂ, ತನ್ನ ಸೈನ್ಯವನ್ನೂ ಕರೆದುಕೊಂಡು ಕಾಲಕೇತು ರಾಕ್ಷಸನ ನಗರಕ್ಕೆ ಹೋದನು. ದೊಡ್ಡದೊಂದು ಸೇನೆ ತನ್ನ ಮೇಲೆ ಏರಿಬರುವ ಸಮಾಚಾರ ಕಾಲ ಕೇತುವಿಗೆ ಗೊತ್ತಾಯಿತು.

ಆ ಸುದ್ದಿ ಕೇಳಿದ ಕೂಡಲೇ ಕಾಲಕೇತುವಿಗೆ ಮಹಾ ಕೋಪ ಉಂಟಾಯಿತು. ಅವನು ಏಕಾವಳಿಯ ಬಳಿಗೆ ಹೋಗಿ, "ಏನೇ, ನನ್ನ ಮೇಲೆ ಸೇನೆ ಯೊಂದಿಗೆ ಬರುವವನು ನಿನ್ನ ತಂದೆಯಾದ ಪಕ್ಷದಲ್ಲಿ, ಇದಿರಾಗಿ ಹೋಗಿ ಸುಸ್ವಾಗತ ಹೇಳಿ ಬರಮಾಡಿಕೊಳ್ಳುತ್ತೇನೆ. ಇನೊಬ್ಬನಾದ ಪಕ್ಷದಲ್ಲಿ ತತ್‌ಕ್ಷಣವೇ ಕೊಂದು ಬಿಡುತ್ತೇನೆ. ಹೇಳು, ಬರುವವನು ಯಾರು ? " ಎಂದನು.

"ನಿನ್ನ ನಿರ್ಬಂಧದಲ್ಲಿರುವ ನನಗೆ ಬರುವವರು ಯಾರೆಂದು ಹೇಗೆ ತಿಳಿಯುತ್ತದೆ ? ಸಾಮಾನ್ಯದವ ರಂತೂ ಇಲ್ಲಿಗೆ ಬರಲಾರರು. ನನ್ನ ತಂದೆಯೋ ಬಂಧುವೋ ಅಲ್ಲವೆಂದು ನಿಶ್ಚಯವಾಗಿ ಹೇಳ ಬಹುದು. ಯಾವನೇ ಆದರೂ ಬಲಶಾಲಿಯೇ ಆಗಿದ್ದಾನು. ಏಕೆ ಬರುವನೋ ಏನೋ ? " ಎಂದಳು ಏಕಾವಳಿ. ಅಷ್ಟರಲ್ಲಿ ದೂತರು ಬಂದು ಯುದ್ಧಕ್ಕೆ ಸಿದ್ಧನಾಗುವಂತೆ ಕಾಲಕೇತುವನ್ನು ಎಚ್ಚರಿಸಿದರು. ಕೂಡಲೇ ಕಾಲಕೇತು ರಥದ ಮೇಲೇರಿ ಯುದ್ಧರಂಗಕ್ಕೆ ಹೋದನು.

ಏಕವೀರನು ಕುದುರೆಯ ಮೇಲೆ ಕುಳಿತು ಕೊಂಡು, ಎಂಟು ಸುತ್ತಲೂ ಒಮ್ಮೆಗೇ ಕಾಣಿಸುವಷ್ಟು ವೇಗದಿಂದ ಅವನೊಂದಿಗೆ ಯುದ್ಧಮಾಡಿದನು. ಸ್ವಲ್ಪಹೊತ್ತು ಯುದ್ಧವು ಘನ ಘೋರವಾಗಿ, ಏಕವೀರನ ಕೈಯ ಪೆಟ್ಟಿನಿಂದ ಕಾಲಕೇತು ರಾಕ್ಷಸನು ಸತ್ತು ಬಿದ್ದನು. ಅವನ ಸೇನೆಗಳು ದಿಕ್ಕಾಪಾಲು ಓಡಿದುವು.

ಯಶೋವತಿ ಓಡಿಹೋಗಿ ಏಕಾವಳಿಗೆ ಈ ವಾರ್ತೆಯನ್ನು ಹೇಳಿದಳು. ಅವರಿಬ್ಬರೂ ಕೂಡಿ ಏಕವೀರನ ಶಿಬಿರಕ್ಕೆ ಬಂದರು. ಅನಂತರ ಏಕವೀರನು ಅವರನ್ನೆಲ್ಲಾ ಕರೆದುಕೊಂಡು ಏಕಾವಳಿಯ ತಂದೆಯ ನಗರಕ್ಕೆ ಹೊರಟನು. ಅಲ್ಲಿ ಏಕಾವಳೀ ಏಕವೀರರ ವಿವಾಹವು ಅತಿವೈಭವದಲ್ಲಿ ನಡೆಯಿತು. ಅಲ್ಲಿಂದ ಏಕವೀರನು ತನ್ನ ಮಡದಿ ಯನ್ನು ಕರೆದುಕೊಂಡು ತನ್ನ ನಗರಕ್ಕೆ ಬಂದು ಸುಖವಾಗಿ ರಾಜ್ಯವಾಳಿಕೊಂಡಿದ್ದನು.

ಏಕವೀರನ ಮಗನ ಹೆಸರು ಕೃತವೀರ್ಯ. ಕೃತವೀರ್ಯನ ಮಗನೇ ಕಾರ್ತವೀರ್ಯ. ಈರೀತಿ ಯಾಗಿ ಹೈಹಯ ವಂಶವು ತುಂಬ ಪ್ರಸಿದ್ಧಿಯಾಗಿ ವರ್ಧಿಸಿದೆ.





# ಪುರುಷದ್ವೇಷಿಣಿ

**ಪೂ**ರ್ವಕಾಲದಲ್ಲಿ ಒಂದಾನೊಂದು ದೇಶದ ರಾಜನಾಗಿದ್ದ ವಿಜಯನೆಂಬ ರಾಜನಿಗೆ ರತ್ನಾವಳಿ ಎಂಬ ಕುಮಾರಿಯಿದ್ದಳು. ಅವಳಿಗೆ ಚಿಕ್ಕಂದಿನಿಂದಲೂ ಕಥೆ ಕೇಳುವ ಹುಚ್ಚು ಬಹಳ. ಅವಳನ್ನು ನೋಡಿಕೊಳ್ಳುತ್ತಿದ್ದ ದಾಸಿಯೇ ಅವಳಿಗೆ ಕಥೆಯ ಹುಚ್ಚು ಹಿಡಿಸಿದವಳು. ಆ ದಾಸಿಯ ತಲೆಯಲ್ಲಿ ತುಂಬಾ ಕಥೆಗಳಿದ್ದುವು. ಆಗ ಕೇಳಿದ ಒಂದು ಕಥೆ ರಾಜಕುಮಾರಿಯ ಮನಸ್ಸಿನಲ್ಲಿ ಚೆನ್ನಾಗಿ ಬೇರೂರಿತ್ತು. ಆ ಕಥೆ ಏನೆಂದರೆ :

ಒಂದಾನೊಂದು ಕಾಡಿನಲ್ಲಿ ಪಾರಿವಾಳಗಳ ಜೋಡಿಯೊಂದಿತ್ತು. ಒಂದು ಗಂಡು, ಒಂದು ಹೆಣ್ಣು. ಬಹಳ ಕಾಲದವರೆಗೆ ಮಕ್ಕಳಿಲ್ಲದ ಅವುಗಳಿಗೆ ಕಡೆಗೆ ನಾಲ್ಕು ಮರಿಗಳು ಹುಟ್ಟಿದುವು. ಒಂದುದಿನ ಅರಣ್ಯದಲ್ಲಿ ಕಾಡುಗಿಚ್ಚು ಹತ್ತಿಕೊಂಡಿತು. ಇನ್ನೂ ಪುಕ್ಕಗಳು ಬಾರದೆ ಹಾರಲಾರದ ಸ್ಥಿತಿಯಲ್ಲಿದ್ದ ಪಾರಿವಾಳ ಮರಿಗಳು ಆ ಕಾಡುಗಿಚ್ಚಿಗೆ ಆಹುತಿಯಾದುವು. ಇದನ್ನು ನೋಡಿ ಹೆಣ್ಣು ಪಾರಿವಾಳವು ಒಂದೇ ಸಮನೆ ಶೋಕಿಸುತ್ತ, 'ನನ್ನ ಮಕ್ಕಳು ಹೋದ ಮೇಲೆ ನಾನು ಮಾತ್ರ ಏಕೆ ಬದುಕಲಿ? ಆ ಕಿಚ್ಚಿನಲ್ಲೇ ಬಿದ್ದು ಆತ್ಮಹತ್ಯ ಮಾಡಿಕೊಳ್ಳುತ್ತೇನೆ' ಎಂದಿತು. ಆಗ ಗಂಡು ಪಾರಿವಾಳವು ತಾನು ಕೂಡಾ ಆತ್ಮಹತ್ಯ ಮಾಡಿಕೊಳ್ಳುತ್ತೇನೆಂದು ಅದರೊಂದಿಗೇ ಹೊರಟಿತು. ಆದರೆ ಅರ್ಧದಾರಿಯಲ್ಲಿ ಅದು 'ನಾವು ಆತ್ಮಹತ್ಯ ಮಾಡಿಕೊಳ್ಳುವ ಅಗತ್ಯವೇನಿದೆ ? ಬೇಡ. ನಾವಿದ್ದರೆ ನಮಗಿನ್ನೂ ಮಕ್ಕಳು ಹುಟ್ಟುತ್ತವೆ. ನಾವೇ ಹೋದರೆ ಮತ್ತೇನಿದೆ? ಬೇಡ ಹಿಂದಿರುಗೋಣ' ಎಂದಿತು. ಅದಕ್ಕೆ ಹೆಣ್ಣುಹಕ್ಕಿ, 'ಛೀ, ನಿನಗೆ ಮಕ್ಕಳು ಸತ್ತವೆಂಬುದಕ್ಕೆ ದುಃಖವೇ ಇಲ್ಲ. ನನ್ನಿಂದ ಈ ದುಃಖದೊಂದಿಗೆ ಬದುಕಿರಲಾಗದು. ನಿನ್ನ ಮಾತು ಕೇಳಲಾರೆ' ಎಂದು ತಾನೇ ಒಂಟಿಯಾಗಿ ಹೋಗಿ ಕಾಡುಗಿಚ್ಚಿನಲ್ಲಿ ಬಿದ್ದು ಪ್ರಾಣಬಿಟ್ಟಿತು. ಈ ಲೋಕದಲ್ಲಿ ಯಾರನ್ನು ನಂಬಿದರೂ ಗಂಡುಸರನ್ನು ಮಾತ್ರ ನಂಬಬಾರದು. ಅವರಿಗೆ ಸ್ಥಿರಬುದ್ಧಿ ಇಲ್ಲ!

ಈ ಕಥೆಯನ್ನು ಕೇಳಿ ರಾಜಕುಮಾರಿ ದಾಸಿಯೊಡನೆ, "ಸತ್ತುಹೋದ ಹೆಣ್ಣು ಪಾರಿವಾಳ ಮತ್ತೇನಾಯಿತು? " ಎಂದು ಕೇಳಿದಳು.

ದಾಸಿ ನಗುತ್ತ "ಆ ಪಾರಿವಾಳವೇ ನಮ್ಮ ರಾಜಾರಾಣಿಯರಿಗೆ ಮಗಳಾಗಿ ಹುಟ್ಟಿದೆ." ಎಂದು



ಹೇಳಿ ರಾಜಕುಮಾರಿಯನ್ನು ಮುದ್ದಿಸುತ್ತಿದ್ದಳು. ರಾಜಕುಮಾರಿ ದೊಡ್ಡವಳಾಗುತ್ತಾ ಬರುವಾಗ ಆ ದಾಸಿ ಸತ್ತುಹೋದಳು. ರಾಜಕುಮಾರಿಯ ಮನಸ್ಸಿನಲ್ಲಿ ಆ ಕಥೆಯೂ ಗಂಡುಸರನ್ನು ನಂಬಬಾರದೆಂಬ ಅದರ ನೀತಿಯೂ ಚೆನ್ನಾಗಿ ಅಚ್ಚೊತ್ತಿಕೊಂಡಿತ್ತು.

ರಾಜಕುಮಾರಿ ರತ್ನಾವಳಿ ಒಂದು ದಿನ ತಂದೆಯೊಂದಿಗೆ, "ಅಪ್ಪಾ, ನನಗಾಗಿ ತೋಟದಲ್ಲಿ ಒಂದು ಪ್ರತ್ಯೇಕವಾದ ಕುಟೀರವನ್ನು ಕಟ್ಟಿಸಿಕೊಡಿ. ಅದರಲ್ಲಿ ನಾನೂ ನನ್ನ ಗೆಳತಿಯರೂ ಮಾತ್ರವೇ ಇರುತ್ತೇವೆ. ಅಲ್ಲಿಗೆ ಒಂದೇ ಒಂದು ಗಂಡುಹುಳವೂ ಬಾರದಂತೆ ತಕ್ಕ ಕಟ್ಟುನಿಟ್ಟು ಮಾಡಿಸಿಬಿಡಿ" ಎಂದಳು.

"ಇದೇನು ಹೇಳುವೆಯಮ್ಮಾ? ನಿನಗೆ ಮದುವೆಯ ವಯಸ್ಸು ಬಂತು. ಇಂದೋ ನಾಳೆಯೋ ನಿನಗೆ ಮದುವೆ ಮಾಡಬೇಕೆಂದಿರುವಾಗ ಇದೆಂಥ ಮಾತು?" ಎಂದನು ತಂದೆ.

"ಈ ಜನ್ಮದಲ್ಲಿ ಮಾತ್ರವಲ್ಲ ಸಾವಿರ ಜನ್ಮವೆತ್ತಿದರೂ ನಾನು ಮದುವೆಯಾಗುವ ಮಾತು ಸುಳ್ಳು!" ಎಂದಳು ರತ್ನಾವಳಿ. ಅವಳು ಒತ್ತಾಯಮಾಡಿ ತಂದೆಯಿಂದ ಪ್ರತ್ಯೇಕ ಕುಟೀರ ಕಟ್ಟಿಸಿಕೊಂಡು ಅದರಲ್ಲಿದ್ದಳು. ಸ್ವಲ್ಪಕಾಲ ಕಳೆದ ಮೇಲೆ ದೂರದೇಶದಿಂದ ಒಬ್ಬ ರಾಜನ ಮಗನೂ ಮಂತ್ರಿಯ ಮಗನೂ ದೇಶ ಸಂಚಾರ ಮಾಡುತ್ತ ಅಲ್ಲಿಗೆ ಬಂದರು. ರಾಜಭವನದ ಆವರಣದಲ್ಲಿರುವ ಸುಂದರವಾದ ತೋಟವನ್ನು ನೋಡಿ, ಸ್ವಲ್ಪಹೊತ್ತು ಅಲ್ಲಿ ವಿಶ್ರಾಂತಿ ತೆಗೆದುಕೊಂಡು ಮುಂದೆ ಹೋಗೋಣವೆಂದು ತೋಟದೊಳಗೆ ಪ್ರವೇಶಿಸಿದರು.

ಅವರು ತೋಟದೊಳಗೆ ಕಾಲಿಟ್ಟ ಮರುಕ್ಷಣದಲ್ಲಿ "ಹೋಗಿ ಹೋಗಿ! ಇಲ್ಲಿಗೆ ಪುರುಷರಾರೂ ಪ್ರವೇಶಿಸಕೂಡದು. ನೀವಾರೋ ಪರದೇಶದವರಂತಿದ್ದೀರಾ? ಇದು ನಮ್ಮ ರಾಜಕುಮಾರಿ ರತ್ನಾವಳೀದೇವಿಯ ಕುಟೀರವಿರುವ ಜಾಗ. ಇಲ್ಲಿಗೆ ಗಂಡುನೊಣ ಬಂದರೂ ಮಹಾರಾಜರು ತೀವ್ರ ಶಿಕ್ಷೆಗೆ ಗುರಿಪಡಿಸುತ್ತಾರೆ!" ಎಂದು ಅರಚುತ್ತಾ ದಾಸಿಯೊಬ್ಬಳು ಓಡೋಡಿ ಅವರ ಮುಂದೆ ಬಂದಳು.

"ನಾವು ನಿನ್ನ ರತ್ನಾವಳಿಯನ್ನು ಎತ್ತಿಕೊಂಡು ಹೋಗುವೆವೆಂದುಕೊಂಡೆಯಾ?" ಎಂದು ಕೇಳಿದ ರಾಜಕುಮಾರ.

"ಆ ಮಾತೇ ಬೇಡ. ನಮ್ಮ ರಾಜಕುಮಾರೀದೇವಿಗೆ ಪುರುಷರ ನೆರಳುಬಿದ್ದ ಸ್ಥಳವೂ ಹಿಡಿಸದು. ಬೇಗ ಹೋಗಿಬಿಡಿ. ನಿಲ್ಲಬೇಡಿ" ಎಂದಳು ದಾಸಿ.

ಮತ್ತೆ ಅಲ್ಲಿ ನಿಲ್ಲದೆ ರಾಜಕುಮಾರ ಮಂತ್ರಿಕುಮಾರರು ಹೊರಗೆ ಬಂದುಬಿಟ್ಟರು. ಆಗ ರಾಜಕುಮಾರನು ಮಂತ್ರಿಕುಮಾರನೊಂದಿಗೆ, "ಮಿತ್ರಾ, ಈ ಪುರುಷದ್ವೇಷಿಣಿಯನ್ನು ಮದುವೆ ಮಾಡಿಕೊಂಡೇ ತೀರಬೇಕೆಂದು ನನ್ನ ಅಂತರಾತ್ಮ ಹೇಳುತ್ತದೆ. ಅದಕ್ಕೇನು ಉಪಾಯ?" ಎಂದನು.



"ಮೊದಲು ಅವಳು ಎಷ್ಟು ಕುರೂಪಿಯೋ ಏನು ಮಣ್ಣೋ? ನಾನು ವಿಚಾರಿಸಿ ನೋಡುತ್ತೇನೆ" ಎಂದ ಮಂತ್ರಿಕುಮಾರ.

ಅಲ್ಲಿಂದ ಇಬ್ಬರೂ ನಗರಕ್ಕೆ ಹೋಗಿ ಒಬ್ಬಳು ಅಡುಗೂಲಜ್ಜಿಯ ಮನೆಯಲ್ಲಿ ವಾಸಕ್ಕೆ ಏರ್ಪಾಡು ಮಾಡಿಕೊಂಡರು. ಮಂತ್ರಿಕುಮಾರನು ಅಡುಗೂಲಜ್ಜಿ ಯೊಡನೆ ಅದೂ ಇದೂ ಮಾತು ತೆಗೆದು, "ಅವ್ವಾ, ನಿಮ್ಮ ರಾಜನ ಮಗಳಿಗೆ ಪುರುಷರ ಮೇಲೆ ದ್ವೇಷ ವಂತೆ ಹೌದಾ? ಅಂದರೆ ಅವಳು ತುಂಬಾ ಕುರೂಪಿ ಗಿರೂಪಿಯಲ್ಲವಷ್ಟೆ?" ಎಂದನು.

"ಅವಳಷ್ಟು ಸುಂದರಿಯಾದ ಹುಡುಗಿ ಪ್ರಪಂಚ ದಲ್ಲಿ ಬೇರೆ ಇರಲಿಕ್ಕಿಲ್ಲ" ಎಂದಳು ಅಡುಗೂಲಜ್ಜಿ.

"ಹಾಗಾದರೆ ಪುರುಷರ ಮೇಲೆ ದ್ವೇಷಕ್ಕೆ ಕಾರಣ ವೇನಂತೆ?" ಎಂದು ಕೇಳಿದ ಮಂತ್ರಿಕುಮಾರ.

"ಅದೊಂದು ಗುಟ್ಟು. ನಾನು ಹೇಳಿದೆ ಅಂತ ಯಾರಿಗೂ ಹೇಳಬೇಡಿ. ರತ್ನಾವಳಿ ಹೋದ ಜನ್ಮದಲ್ಲಿ ಹೆಣ್ಣು ಪಾರಿವಾಳವಾಗಿದ್ದವಳು. ಅಪರೂಪವಾಗಿ ಹುಟ್ಟಿದ ಮರಿಗಳನ್ನು ಕಾಡುಗಿಚ್ಚು ನುಂಗಿತಂತೆ. ಗಂಡುಪಾರಿವಾಳ ಹೆಣ್ಣು ಪಾರಿವಾಳ ಎರಡೂ ಕೂಡಿ ಆತ್ಮಹತ್ಯ ಮಾಡಿಕೊಳ್ಳಲು ಹೊರಟಿವೆ. ನಡು ದಾರಿಯಲ್ಲಿ ಗಂಡುಪಾರಿವಾಳ ತಪ್ಪಿಸಿಕೊಂಡು ಹೋಯಿತು. ಹೆಣ್ಣು ಪಾರಿವಾಳ ಕಾಡುಗಿಚ್ಚಿನಲ್ಲಿ ಬಿದ್ದು ಸತ್ತು ನಮ್ಮ ರಾಜಕುಮಾರಿಯಾಗಿ ಹುಟ್ಟಿದ್ದಾಳೆ." ಎಂದಳು ಅಡುಗೂಲಜ್ಜಿ.

"ಈ ರಹಸ್ಯವನ್ನು ಯಾರು ಕಂಡು ಹೇಳಿದರು?" ಎಂದು ಮಂತ್ರಿಕುಮಾರ ಕೇಳಿದ. "ಯಾರು ಯಾಕೆ ಹೇಳಬೇಕವ್ವಾ? ನಮ್ಮ ರಾಜಕುಮಾರಿ ಪುಣ್ಯಾತ್ಮಳು. ಆದ್ದರಿಂದ ಪೂರ್ವ ಜನ್ಮಜ್ಞಾನ ಅವಳಿಗಿದೆ" ಎಂದಳು ಅಡುಗೂಲಜ್ಜಿ.

"ಓಹೋ! ಹಾಗೇನು? ಇದು ನಿನಗೆ ಹೇಗೆ ಗೊತ್ತಾಯಿತೋ!" ಎಂದನು ಮಂತ್ರಿಕುಮಾರ, ಅವಳ ಮೊಮ್ಮಗಳ ಗೆಳತಿಯೊಬ್ಬಳು ರಾಜ ಕುಮಾರಿಯ ಚಾಕರಳಾಗಿ ಅರಮನೆಯಲ್ಲಿರುವಳಂತೆ. ಅವಳ ಮೂಲಕವಾಗಿ ಇವಳಿಗೆ ಆ ರಹಸ್ಯವು ಗೊತ್ತಾಯಿತಂತೆ. ರಾಜಕುಮಾರ ಮಂತ್ರಿಕುಮಾರರು ಏನೋ ಆಲೋಚನೆ ಮಾಡಿಕೊಂಡು ಮರುದಿನ ಬೆಳಗಾದ ಮೇಲೆ ಅಡುಗೂಲಜ್ಜಿಯ ಮನೆಯಿಂದ ಹೊರಟರು. ಇಬ್ಬರೂ ಊರಹೊರಗೆ ಹೋಗಿ ವೇಷ ಬದಲಾಯಿಸಿಕೊಂಡು ಹಿಂದಿರುಗಿ, ನೇರಾಗಿ ರಾಜನ ಆಸ್ಥಾನಕ್ಕೆ ಹೋದರು.

"ಯಾರು ನೀವು? ಯಾವ ದೇಶದವರು?" ಎಂದು ರಾಜನು ಅವರನ್ನು ಪ್ರಶ್ನಿಸಿದನು. "ಮಹಾ ರಾಜರೇ, ನಮ್ಮದು ನೇಪಾಳದೇಶ. ಇವರು ನನ್ನ ಗುರುಗಳು. ಇಂದ್ರಜಾಲ ವಿದ್ಯೆಯಲ್ಲಿ ಇವರಿಗೆ ಸಮಾನರಾದವರು ಪ್ರಪಂಚದಲ್ಲೇ ಇಲ್ಲ. ಜಲ ಸ್ತಂಭನ, ವಾಯುಸ್ತಂಭನ, ಅಗ್ನಿಸ್ತಂಭನ ಮೊದಲಾದ ವಿದ್ಯೆಗಳನ್ನು ಇವರು ತೋರಿಸಬಲ್ಲರು. ಮರಳು



ಗಾಡಿನಲ್ಲಿ ಮಹಾರಣ್ಯ ಹುಟ್ಟಿಸುವರು. ಒಣಗಿದ ಮರಗಳ ಮೇಲೆ ಹಣ್ಣುಗಳನ್ನು ಸೃಷ್ಟಿಸುವರು. ಇನ್ನೂ ಎಷ್ಟೋ ಅದ್ಭುತಗಳನ್ನು ತೋರಿಸುವರು. ಅದನ್ನೆಲ್ಲ ತಾವು ನೋಡಿ ಮೆಚ್ಚಿ ತಕ್ಕ ಬಹುಮಾನ ಕೊಡಬೇಕು." ಎಂದನು ಮಂತ್ರಿಕುಮಾರ.

"ಒಳ್ಳೆಯದು. ಈ ಪ್ರದರ್ಶನವನ್ನು ನಮ್ಮ ತೋಟದ ಕುಟೀರದ ಹತ್ತಿರ ಏರ್ಪಾಡು ಮಾಡಿಸುತ್ತೇನೆ. ನನ್ನ ಮಗಳು ಕೂಡಾ ಅದನ್ನು ನೋಡಿ ಸಂತೋಷಪಡುತ್ತಾಳೆ" ಎಂದನು ರಾಜ.

ಮಂತ್ರಿಕುಮಾರನು ರಾಜನ ಮಾತು ಕೇಳಿ ಆಂದೋಳನೆಗೊಂಡಂತೆ ಅಭಿನಯಿಸುತ್ತ, "ಹಾಗೆ ಬೇಡ ಮಹಾರಾಜರೆ! ನಮ್ಮ ಗುರುಗಳು ಮಹಾ ಸ್ತ್ರೀ ದ್ವೇಷಿಗಳು. ಹೆಂಗುಸರನ್ನು ನೋಡಲಾರರು. ನಿಮ್ಮಿಂದ ಬಹುಮಾನದೊರೆಯದೆ ಹೋದರೂ ಚಿಂತೆಯಿಲ್ಲ. ವ್ರತಭಂಗವಾಗಲು ಎಷ್ಟು ಮಾತ್ರಕ್ಕೂ ಸಾಧ್ಯವಿಲ್ಲ, ಕ್ಷಮಿಸಿ" ಎಂದನು.

"ಹಾಗೇನು? ಹೋಗಲಿ. ಸ್ತ್ರೀಯರು ಅವರ ಕಣ್ಣಿಗೆ ಬೀಳದಂತೆ ರಹಸ್ಯವಾಗಿ ಪ್ರದರ್ಶನ ನೋಡುವುದರಲ್ಲಿ ಅಭ್ಯಂತರವಿರಲಿಕ್ಕಿಲ್ಲವಷ್ಟೆ?" ಎಂದು ಕೇಳಿದ ರಾಜ.

"ಅವರು ಕಣ್ಣಿಗೆ ಬೀಳಕೂಡದು. ಅವರ ಕಂಠ ಸ್ವರವೂ ಕೇಳಬಾರದು" ಎಂದ ಮಂತ್ರಿಕುಮಾರ.

ಆ ಪ್ರಕಾರವೇ ಏರ್ಪಾಡು ನಡೆಯಿತು. ತೋಟದ ಆವರಣದೊಳಗೆ ಸ್ತ್ರೀಯರಿಗೆ ಪ್ರತ್ಯೇಕವಾದ ಜಾಗವನ್ನು ಮಾಡಿಸಲಾಯಿತು. ಸ್ತ್ರೀಯರು ಕಣ್ಣಿಗೆ ಕಾಣದಂತೆ ತೆರೆಗಳನ್ನು ಕಟ್ಟಿದರು. ಪುರುಷ ದ್ವೇಷಿಣಿಯಾದ ರಾಜಕುಮಾರಿಗೂ ಇದು ಒಪ್ಪಿಗೆಯಾಯಿತು.

ಇಂದ್ರಜಾಲವು ಪ್ರಾರಂಭವಾಗುವ ಮೊದಲು ರಾಜಕುಮಾರನು ಎದ್ದು ನಿಂತು ಹೀಗೆ ಹೇಳತೊಡಗಿದನು: "ನನ್ನ ವಿದ್ಯೆಗಳನ್ನು ಸ್ತ್ರೀಯರು ಸರಿಯಾಗಿ ನೋಡಲಾಗದೆ ಹೋದರೆ ಮಹಾರಾಜರು ನನ್ನನ್ನು ಕ್ಷಮಿಸಬೇಕು. ನನಗಿರುವ ಸ್ತ್ರೀದ್ವೇಷಕ್ಕೆ ಕಾರಣವೇನೆಂಬುದನ್ನು ಹೇಳಿಬಿಡುತ್ತೇನೆ. ನನಗೆ ಪೂರ್ವಜನ್ಮದ ಜ್ಞಾನವಿದೆ. ನಾನು ಹೋದ ಜನ್ಮದಲ್ಲಿ ಕಾಡು ಪಾರಿವಾಳವಾಗಿ ಕಾಡಿನಲ್ಲಿದ್ದೆ. ಆಗ ನನ್ನ ಹೆಂಡತಿ ಪಾರಿವಾಳದ ಜತೆಯಲ್ಲಿ ತುಂಬಾ ಅನ್ಯೋನ್ಯವಾಗಿದ್ದೆನು. ನಮಗೆ ಅಪರೂಪವಾಗಿ ನಾಲ್ಕು ಮರಿಗಳು ಹುಟ್ಟಿದಾಗ, ಅಗ್ನಿದೇವನು ಅವುಗಳನ್ನು ನುಂಗಿಬಿಟ್ಟ. ನಾನೂ ನನ್ನ ಹೆಂಡತಿಯೂ ಆತ್ಮಹತ್ಯ ಮಾಡಿಕೊಳ್ಳಲು ನೋಡಿದೆವು. ಅದಕ್ಕಾಗಿ ಬೆಂಕಿಗೆ ಬೀಳಲು ಹೋಗುವಾಗ ನನ್ನ ಹೆಂಡತಿ ಎಲ್ಲಿಗೋ ಓಡಿಹೋದಳು. ನಾನು ಮಾತ್ರ ಸ್ತ್ರೀಯರನ್ನು ಯಾವ ಜನ್ಮದಲ್ಲಿಯೂ ನಂಬಬಾರದೆಂದುಕೊಂಡು ಕಾಡುಗಿಚ್ಚಿಗೆ ಬಿದ್ದು ಪಾರಿವಾಳ ಜನ್ಮದಿಂದ ಮುಕ್ತನಾಗಿ, ಆ ಪುಣ್ಯ ಫಲದಿಂದ ಈ ನರಜನ್ಮದಲ್ಲಿ ಇಂದ್ರಜಾಲ ವಿದ್ಯೆಗಳೊಂದಿಗೇ ಹುಟ್ಟಿದ್ದೇನೆ.

ಇನ್ನೆಂದಿಗೂ ಯಾವ ಜನ್ಮದಲ್ಲಿಯೂ ನನ್ನ ಹೆಂಡತಿಗೆ ಮದುವೆಯೇ ಆಗದೆ ಹೋಗಲೆಂದು ಶಾಪಕೊಟ್ಟು, ನಾನು ಸ್ತ್ರೀ ದ್ವೇಷಿಯಾಗಿಯೇ ಇದ್ದೇನೆ."

ಇದನ್ನೆಲ್ಲಾ ಕೇಳುತ್ತಿದ್ದ ರತ್ನಾವಳಿ ಆವೇಶದಿಂದ ಎದ್ದು ತೆರೆಯ ಹಿಂದಿನಿಂದ ಮುಂದೆ ಬಂದು "ಸುಳ್ಳು! ಹಸಿಹಸೀ ಸುಳ್ಳು! ಮಕ್ಕಳ ಸಾವಿನ ಶೋಕದಿಂದ ಬೆಂಕಿಗೆಬಿದ್ದು ಸತ್ತವಳು ನಾನು! ನೀನೇ ಸಾಯುವುದು ಬೇಡವೆಂದು ಹೇಳಿ ನನ್ನ ಕಣ್ಣು ತಪ್ಪಿಸಿ ಎತ್ತಲೋ ಹಾರಿಹೋದೆ!" ಎಂದಳು.

"ನಾನಾ? ನೀನೇ ಹಾಗೆಹೇಳಿ ಓಡಿದವಳು. ನಾನು ಆ ಕ್ಷಣದಲೇ ಬೆಂಕಿಗೆಬಿದ್ದು ಸತ್ತೆ! ನೀನೇ ನನಗೆ ಮೋಸಮಾಡಿದೆ!" ಎಂದ ರಾಜಕುಮಾರ.

"ನಾವು ಬದುಕಿದ್ದರೆ ಮತ್ತೆ ಮಕ್ಕಳು ಹುಟ್ಟುತ್ತ ವೆಂದವನು ನೀನೇ ಅಲ್ಲವೇ ಮೋಸಗಾರಾ?" ಎಂದಳು ರಾಜಕುಮಾರಿ.

"ನಿನ್ನ ನಿಶ್ಚಯವನ್ನು ಪರೀಕ್ಷಿಸಲಿಕ್ಕೆ ಹಾಗೆ ಹೇಳಿದೆ ನಲ್ಲದೆ, ದೇವರಿಗೆ ಮಕ್ಕಳನ್ನು ಕೊಡಬೇಕೆಂದಿದ್ದರೆ ಹಾಗೆ ಬೆಂಕಿಗೆ ಹಾಕಿಸುತ್ತಿದ್ದನೇ? ನೀನೇ ಮೋಸ ಗಾರಿಣಿ. ನಾನು ಹಾಗೆ ಹೇಳಿದಕೂಡಲೇ ನೀನೇ ಬೇರೆ ದಿಕ್ಕಿಗೆ ಹಾರಿಹೋದವಳು. ಕಳ್ಳಿಯಾಗಿ ತಪ್ಪಿಸಿ ಕೊಂಡವಳು" ಎಂದ ರಾಜಕುಮಾರ ಕೋಪವನ್ನು ನಟಿಸುತ್ತ.

"ಅದುದೇನೋ ಆಗಿಹೋಯಿತು ಗುರುವೇ. ನೀವು ನಿಮ್ಮ ಹೆಂಡತಿಯನ್ನು ಕ್ಷಮಿಸಿ ಕೈಹಿಡಿದು ಕಾಪಾಡಿರಿ. ನಿಮ್ಮನ್ನು ಆ ಪರಮೇಶ್ವರನೇ ಒಂದು ಗೂಡಿಸಿದನೆಂದು ನಾವೆಲ್ಲಾ ಅಂದುಕೊಳ್ಳುತ್ತೇವೆ" ಎಂದ ಮಂತ್ರಿಕುಮಾರ.

ರಾಜಕುಮಾರನು ಪ್ರಸನ್ನತೆಯನ್ನು ತಂದು ಕೊಂಡು, ರತ್ನಾವಳಿಯ ಬಳಿಗೆ ಹೋಗಿ. "ನಾನು ನಿನಗೆ ಅನ್ಯಾಯ ಮಾಡಿದೆನೆಂದು ತಿಳಿದಿರುವೆಯಾದರೆ ಕ್ಷಮಿಸಿಬಿಡು. ಅಂತೂ ನಾವಿಬ್ಬರೂ ಬೆಂಕಿಗೆಬಿದ್ದು ಸತ್ತವರೇ! ಇಷ್ಟು ದಿನ ನೀನು ಬೆಂಕಿಯಲ್ಲಿ ಸಾಯ ಲಿಲ್ಲವೆಂದೇ ಅಂದುಕೊಂಡೆ." ಎಂದನು.

"ನಾನೇ ಪಾಪಿಷ್ಠಳು. ನನ್ನನ್ನು ಸಾಯಲು ಬಿಟ್ಟು ನೀವು ತಪ್ಪಿಸಿಕೊಂಡಿರೆಂದುಕೊಂಡೆ. ನನ್ನನ್ನೇ ನೀವು ಕ್ಷಮಿಸಿ!" ಎಂದಳು ರತ್ನಾವಳಿ.

ಒಬ್ಬ ಇಂದ್ರಜಾಲದವನಿಗೆ ಮಗಳನ್ನು ಕೊಡು ವುದೇ ಎಂಬ ರಾಜನ ಆಂದೋಳನೆಯೂ ಕೂಡಲೇ ಪರಿಹಾರವಾಯಿತು. ರಾಜಕುಮಾರನ ನಿಜ ಸಂಗತಿ ಗೊತ್ತಾಯಿತು. ಆ ರಾಜಕುಮಾರನು ತೋರಿಸಿದ ಇಂದ್ರಜಾಲವೆಂದರೆ ರತ್ನಾವಳಿಯ ಪುರುಷದ್ವೇಷ ವನ್ನು ಹೋಗಲಾಡಿಸಿದ್ದೇ. ಇದಕ್ಕೆ ಬಹುಮಾನ ವಾಗಿ ರಾಜನು ರತ್ನಾವಳಿಯನ್ನು ಅವನಿಗೆ ಕೊಟ್ಟು ಶುಭಮುಹೂರ್ತದಲ್ಲಿ ಮದುವೆ ಮಾಡಿಸಿದನು.



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೫

### ಗೆದ್ದ ಶೀರ್ಷಿಕೆಗಳು ೧೯೮೦ ಸೆಪ್ಟೆಂಬರ್ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ







Bhalchandra Kadne — N. S. Olaniya

- ★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.
- ★ ಜೂಲೈ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.
- ★ ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂಪಾಯಿ ೨೫ ಬಹುಮಾನ.
- ★ ಶೀರ್ಷಿಕೆಗಳನ್ನು ಪೋಸ್ಟುಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು-೬೦೦ ೦೨೬

---

## ಮೇ ಸ್ಪರ್ಧೆಯ ಫಲಿತಾಂಶ:

ಮೊದಲನೇ ಫೋಟೋ: **ತನ್ನಕಾಲಿಗೆ ತನ್ನ ಕೈಯೇ ಬರುವುದಲ್ಲದೆ**

ಎರಡನೇ ಫೋಟೋ: **ಇನ್ನೊಬ್ಬರಕ್ಕೆ ಎಷ್ಟರ ವರೆಗೋ?**

ಕಳುಹಿಸಿದವರು: **ಎಸ್. ಕೆ. ಜಯಲಕ್ಷ್ಮಿ**

ಮಲ್ಲಿಕಾರ್ಜುನ ರೈಸ್‌ಮಿಲ್ ರೋಡು, ಶಿರಾಳಕೊಪ್ಪ, ಶಿವಮೊಗ್ಗಾ.

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188, Arcot Road, Madras-600 026 (India). Controlling Editor: NAGI REDDI.



# ಚಂದಮಾಮ

## ಮುಖ್ಯವಾಗಿ ಗಮನಿಸಿರಿ

*

'ಚಂದಮಾಮ' ಪತ್ರಿಕೆಗೆ ಸಂಬಂಧ ಪಟ್ಟ ಚಂದಾ, ಏಜನ್ಸೀ ಡಿಪಾಜಿಟ್ಸ್, ಇಂಡೆಂಟು ಮೊಬಲಗು, ಪ್ರಕಟನೆಯ ಚಾರ್ಜು ಮೊದಲಾದುವುಗಳನ್ನೆಲ್ಲಾ ಕೆಳಗಿನ ವಿಳಾಸಕ್ಕೇ ಕಳುಹಿಸಿರಿ.

*

ಡಾಲ್ಟನ್ ಏಜನ್ಸೀಸ್
ಚಂದಮಾಮ ಬಿಲ್ಡಿಂಗ್ಸ್
ವಡಪಳನಿ, ಮದರಾಸು-೬೦೦ ೦೨೬

# ಚಂದಮಾಮ ಕ್ಯಾಮಲ್

## ಬಣ್ಣಹಾಕುವ ಸ್ಪರ್ಧೆ

ಪ್ರವೇಶಧನವಿಲ್ಲ





**ಬಹುಮಾನ ಗಳಿಸಿರಿ.**

ಕ್ಯಾಮಲ್—ಪ್ರಥಮ ಬಹುಮಾನ ರೂ. 15
ಕ್ಯಾಮಲ್—ದ್ವಿತೀಯ ಬಹುಮಾನ ರೂ. 10
ಕ್ಯಾಮಲ್—ತೃತೀಯ ಬಹುಮಾನ ರೂ. 5
ಕ್ಯಾಮಲ್—5 ಪ್ರೋತ್ಸಾಹಕ ಬಹುಮಾನಗಳು
ಕ್ಯಾಮಲ್—10 ಸರ್ಟಿಫಿಕೇಟ್‌ಗಳು

ಚುಕ್ಕೆ ಗೆರೆಯ ಉದ್ದಕ್ಕೂ ಕತ್ತರಿಸಿರಿ.

ಕೇವಲ 12 ವರ್ಷದ ವರೆಗಿನ ಪ್ರಾಯದ ವಿದ್ಯಾರ್ಥಿಗಳು ಭಾಗವಹಿಸಬಹುದು ■ ಮೇಲಿನ ಚಿತ್ರಕ್ಕೆ ಯಾವುದೇ 'ಕ್ಯಾಮಲ್' ಬಣ್ಣಗಳಿಂದ ಬಣ್ಣ ಹಾಕಿರಿ ■ ಬಣ್ಣ ಹಾಕಿದ ಪ್ರವೇಶಪತ್ರಗಳನ್ನು ಕೆಳಗಿನ ವಿಳಾಸಕ್ಕೆ ಕಳಿಸಿರಿ
P.B. No. 9928, COLABA, Bombay-400 005.
ಫಲಿತಾಂಶವು ಅಂತಿಮ ನಿರ್ಣಯವಾಗಿದೆ, ಮತ್ತು ಇದರ ಸಲುವಾಗಿ ಪತ್ರವ್ಯವಹಾರಕ್ಕೆ ಗಮನ ಕೊಡಲಾಗುವುದಿಲ್ಲ.

Name ______________________ Age ______________

Address ________________________________________

ದಯವಿಟ್ಟು ನಿಮ್ಮ ಹೆಸರು ಮತ್ತು ವಿಳಾಸವನ್ನು ಇಂಗ್ಲಿಷಿನಲ್ಲಿ ಬರೆಯಿರಿ.

ದಯವಿಟ್ಟು ಚಿತ್ರವನ್ನು ಪೂರ್ತಿಯಾಗಿ ಬಣ್ಣದಿಂದ ತುಂಬಿರಿ.
ಪ್ರವೇಶಪತ್ರಗಳನ್ನು ಕಳುಹಿಸುವ ಕೊನೆಯ ತಾರೀಕು: *31-7-1980*

Vision

**CONTEST NO.15**